## ಮಣ್ಯಂ ಕಂಪನಿಯವರ ತಯಾರಿಕೆಗಳು




ಮಣ್ಯಂ ಕಂಪನಿಯವರ ಸ್ನೋ, ಹೇರ್ ಆಯಿಲ್ ಮತ್ತು ಸೋಪ್ ಕರ್ನಾಟಕದಲ್ಲೆಲ್ಲ ಪ್ರಸಿದ್ಧಿ ಪಡೆದಿವೆ. ಅನೇಕ ವಸ್ತು ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಪಡೆದಿವೆ. ಸೌಂದರ್ಯೋಪಕರಣಗಳಲ್ಲಿ ಇವಕ್ಕೆ ಮಿಗಿಲೆನಿಸುವವು ಬೇರೆ ಯಾವವೂ ಇಲ್ಲ ಎನಿಸಿಕೊಂಡಿವೆ. ಒಂದು ಸಾರಿ ಪರೀಕ್ಷಿಸಿ ನೋಡಿ, ತಾನೇ ತಿಳಿಯುತ್ತೆ !!




## ಮಣ್ಯಂ ಅಂಡ್ ಕಂಪನಿ, ಮದ್ರಾಸು.

ಬೇಗನೆ ಬರುವುದು!



# ಹರಿಶ್ಚಂದ್ರ

(ಕನ್ನಡ)

| | |
|---|---|
| ಸುಬ್ಬಯ್ಯನಾಯ್ಡು. | B.S.ರಾಜ್ಯೆಂಗಾರ್..... |
| ನಾಗೇಂದ್ರರಾವ್.. | G.V.ಕೃಷ್ಣಮೂರ್ತಿರಾವ್. |
| ಲಕ್ಷ್ಮೀಬಾಯಿ.... | M.G.ಮರಿರಾವ್....... |

STUDIO : PRAGATI

a

FAMOUS TALKIE

RELEASE

ಸೆಲೆಕ್ಟ್

ಟಾಕೀಸಿನಲ್ಲಿ

ಏಪ್ರಿಲ್ ೯ನೇ ತಾರೀಖಿನಿಂದ

ಪ್ರದರ್ಶನ

★

# ತಮನ್ನ

**ತಾರಾಗಣ :**

ಲೀಲಾ ದೇಸಾಯಿ

ಜಯರಾಜ್

●

ವಿವರಗಳಿಗೆ—

## ಚಂದ್ರ ಫಿಲ್ಮ್ಸ್ ಲಿ.

**ಗಾಂಧಿನಗರ, ಬೆಂಗಳೂರು**

ಇವರಿಗೆ ಬರೆಯಿರಿ.



Printed & Published by K. Jeevanna Rao at the Prajamata Power Press,
Bangalore City—Editor: Dr. M. SHIVARAM.



ಸಂಪುಟ ೨] ಕೊರವಂಜಿ—ಎಪ್ರಿಲ್ ೧೯೪೩—ವಾರ್ಷಿಕ ಸಂಚಿಕೆ [ಸಂಚಿಕೆ ೧

# ಕುಹಕಿಡಿಗಳು

ಬೆಂಗಳೂರಿನಲ್ಲಿ ಕಾಮನ ಹಬ್ಬವು ಸಾಂಗವಾಗಿ ನೆರವೇರಿತು.

—ಹೌದು. ಸಾಕಷ್ಟು ಕಾರಣಗಳೂ ಇದ್ದುವು.

* * *

ಬಂಗಾಳಾದಲ್ಲಿ ಫಜಲುಲ್ ಹಕ್ಕರು ರಾಜೀನಾಮೆಯನ್ನು ಕೊಡಲಿಲ್ಲವಂತೆ.

—ಆದರೆ ಗವರ್ನರು ರಾಜೀನಾಮೆಯನ್ನು ತೆಗೆದುಕೊಂಡು ಅಂಗೀಕರಿಸಿದರಂತೆ

* * * *

ಅಧ್ಯಕ್ಷ ರೂಸವೆಲ್ಟರ ಪ್ರತಿನಿಧಿಯಾದ ಶ್ರೀ|| ಫಿಲಿಪ್ಸರು ವಿಮಾನ ಕಾರ್ಖಾನೆಗೆ ಹೋಗಿದ್ದರಂತೆ.

—ಕಾರ್ಖಾನೆಯಲ್ಲಿ ಇವರ ಪರಿಚಯವಿಲ್ಲದ ಅಧಿಕಾರಿಯೊಬ್ಬನು "ನಾಳೆಯಿಂದ ಕೆಲಸಕ್ಕೆ ಬನ್ನಿ" ಎಂದು ಹೇಳಿದನಂತೆ.

* * * *

ಇನ್ನು ಮೇಲೆ ಕೈಗಡಿಯಾರಗಳನ್ನು ಯಾರೂ ಉಪಯೋಗಿಸುವುದಿಲ್ಲವಂತೆ.

—ಯಾಕೆ ಒಂದು ಗಂಟೆ ಹಿಂಚುಮುಂಚು ಆದರೆ ಇಷ್ಟು ಕೋಪವೇ?

* * * *

ವೈದ್ಯನೊಬ್ಬನು ಕವಿತೆಗಳನ್ನು ಬರೆಯುತ್ತಿರುವನಂತೆ.

—ಚೆನ್ನಾಗಿ ಕುಲುಕಿ, ದಿನಕ್ಕೆ ಮೂರು ವೇಳೆ ಬರೆಯುತ್ತಾನೆಯೇ?

* * * *

ಇಂಗ್ಲೀಷಿನವರು ಕಿವಿ ಚುಚ್ಚಿಸಿಕೊಳ್ಳುತ್ತಾರೆಯೇ?

—ಹೌದು. ಆದರೆ ಅವರು ಜಾಸ್ ಸಂಗೀತದಿಂದ ಹಾಗೆ ಮಾಡಿಕೊಳ್ಳುತ್ತಾರೆ.

* * * *

ಭಾರತಕ್ಕೆ ಹತ್ತು ಸಾವಿರ ಅಲಾರಾಂ ಗಡಿಯಾರಗಳು ಬಂದಿವೆಯಂತೆ.

—ಅಂದ ಮೇಲೆ ಭಾರತವು ಎಚ್ಚೆತ್ತಂತೆಯೇ?

* * * *

ಉಬ್ಬಿದ ಹಲ್ಲುಗಳು ಮನುಷ್ಯನ ಬುದ್ಧಿಶಕ್ತಿಯನ್ನು ಸೂಚಿಸುತ್ತವಂತೆ.

—ಒಡೆದ ಹಲ್ಲುಗಳು ಕುಶಾಗ್ರಬುದ್ಧಿಯನ್ನು ಸೂಚಿಸುತ್ತವೆ.

* * * *

ಯುದ್ಧ ಶುರುವಾದ ಮೇಲೆ ಕಳ್ಳತನ ಕಡಿಮೆಯಾಗಿದೆಯಂತೆ.

—ಜನಜೀವನದ ಸಮಸ್ಯೆಗಳೆಲ್ಲವನ್ನೂ ಸರ್ಕಾರವೇ ಈಗ ವಹಿಸಿಕೊಂಡಿದೆಯಲ್ಲವೇ?

* * * *

ರೆಕಾರ್ಡು ಕಛೇರಿಯ ನೌಕರನೊಬ್ಬನು ಮಧ್ಯಾಹ್ನ ಎರಡು ಗಂಟೆಯ ಹೊತ್ತಿನಲ್ಲೇ ಇಸ್ಪೀಟು ಆಡುತ್ತಿದ್ದನಂತೆ.

—ಮಧ್ಯಾಹ್ನ ಎರಡು ಗಂಟೆಗೆ ಎಚ್ಚರವಾಗಿರಬಲ್ಲರು ಎಂಬುದು ಇದರಿಂದ ಸ್ಪಷ್ಟವಾಯಿತು.

* * * *

ವೈಜ್ಞಾನಿಕ ಸಂಶೋಧನೆಗಳಿಂದ ಭೂಲೋಕವು ಇನ್ನೂ ನಾಲ್ಕು ಸಾವಿರ ಕೋಟಿ ವರ್ಷಗಳು ನಾಶವಾಗುವುದಿಲ್ಲವಂತೆ.

—ಅಯ್ಯೋ ಇನ್ನೂ ಎಷ್ಟು ದಿವಸವಪ್ಪಾ ಯುದ್ಧ.

* * * *

ಸುಪ್ರಸಿದ್ಧ ರಾಜಕಾರಣಪಟುವೊಬ್ಬನು ತನ್ನ ತಲೆಯನ್ನು ಎಕ್ಸ್-ರೇಯಿಂದ ಹುಡುಕಿದನಂತೆ.

—ಛೀ, ಛೀ. ಅವನು ಸೂಕ್ಷ್ಮದರ್ಶಕ ಯಂತ್ರವನ್ನು ಉಪಯೋಗಿಸಿದ್ದರೆ, ಏನಾದರೂ ಕಾಣುತ್ತಿತ್ತು.

* * * *

ತನ್ನ ಹಾಸಿಗೆಯನ್ನು ಬೇರೆ ಜಾಗದಲ್ಲಿ ಹಾಕಿದಾಗಿನಿಂದ ನಿದ್ರೆಯು ಚೆನ್ನಾಗಿ ಬಂತು ಎಂದು ಸಹಪತ್ರಿಕೆಯಲ್ಲಿ ಓದುಗನ ಕಾಗದ.

—ಪತ್ರಿಕೆಯನ್ನು ಬೇರೆ ಮಾಡಿದರೂ ನಿದ್ರೆ ಬರುತ್ತಿತ್ತು.

* * * *

ಹದಿನೆಂಟು ವರ್ಷದ ಬಂಗಾಳಾ ಹುಡುಗನೊಬ್ಬನ ಮೊದಲ ಪುಸ್ತಕವು ಸರ್ಕಾರದಿಂದ ಬಹಿಷ್ಕೃತವಾಗಿದೆಯಂತೆ.

—ಇದರಿಂದ ಹುಡುಗನ ತಲೆಯು ತಿರುಗದೇ ಇರಲಿ ಎಂದು ನಮ್ಮ ಆಶೆ.

---

# ಹುರಿಗಾಳು

ಸ್ವಾಮಿ! ಕ್ಷಮಿಸಿ, ಸ್ವಾಮಿ! ಒಂದು ಸಮಾಚಾರ ತಮ್ಮಿಂದ ತಿಳಿದು ಕೊಳ್ಳಬೇಕಾಗಿತ್ತು....

ಏನಪ್ಪಾ ಅದು....

ಹತ್ತಿರ ಎಲ್ಲಾದರೂ ಪೋಲೀಸ್ ಸ್ಟೇಷನ್ ಇದೆಯೇ, ಸ್ವಾಮಿ?

ಇಲ್ಲಪ್ಪ....

ಹಾಗಾದರೆ, ತಮ್ಮ ಕೈಯಲ್ಲಿರುವ ಗಂಟನ್ನ ಇತ್ತಲಾಗಿ ಕೊಟ್ಟುಬಿಟ್ಟು ನಡೀರಿ ಆಚೆಗೆ.... ಇಲ್ಲದೆ ಇದ್ದರೆ, ತಲೆ ಬುರುಡೆ ಒಡೆದು ಹಾಕಿ ಬಿಟ್ಟೇನು, ಹುಷಾರ್!

* * *

ಮಗ:—ನಮ್ಮ ಮೇಷ್ಟ್ರಿಗೆ ಜ್ವರ ಬಂದಿದೆಯಣ್ಣಾ! ನಾಳೆ ಅವರು ಸ್ಕೂಲಿಗೆ ಬರುವುದೇ ಇಲ್ಲ, ನಮಗೆಲ್ಲಾ ತುಂಬಾ ಖುಷಿ!

ತಂದೆ:—ಹಾಗೆಲ್ಲಾ ಅನ್ನಬಾರದು ಕಣೋ! ಗುರು ಅಂದರೆ ದೇವರ ಸಮಾನ ಅಂತ ಉಪನಿಷತ್ತುಗಳಲ್ಲೇ ಹೇಳಿದೆ.

ಮಗ:—ಉಪನಿಷತ್ತುಗಳನ್ನು ಬರೆದಾಗ ನಮ್ಮ ಮೇಷ್ಟ್ರು ಇರಲಿಲ್ಲ, ಅಣ್ಣ!

* * *

ಐದಾರು ಅಳಿಯಂದಿರು ಸದಾ ಕಾಡಿ ಸುತ್ತಿರುವ ಒಬ್ಬ ಮಾವನವರ ಮನೆಗೆ ಕಳ್ಳ ನುಗ್ಗಿದ. ಹಾಸಿಗೆ ಹತ್ತಿರ ನಿಂತು ಗನರಿಸಿದ. "ನೋಡಿ, ಸಾಹುಕಾರರೇ! ನನಗಿನ್ನೇನೂ ಬೇಕಿಲ್ಲ! ಹಣದ ಗಂಟು ಕೊಟ್ಟು ಬಿಡಿ ಸಾಕು, ನಾನು ಹೊರಟು ಹೋಗುತ್ತೇನೆ" ಅಂದ. ಸಾಹುಕಾರರು "ಥೂ! ನೀನೂ ಅವರ ಹಾಗೇನೇ! ಒಂದೇ ಸಲ್ಲವ!" ಅಂದರಂತೆ.

* * *

ಇದೇ ಕಾರಿನಲ್ಲಿ ಯಾವತ್ತಾದರೂ ಅನಾಹುತವಾಗಿದೆಯೇನ್ರಿ? ನಿಮಗೆ?—ಅಂತ ಪೋಲೀಸಿನವರು ವಿಚಾರಿಸಿದರೆ, ಅವರು "ಅನಾಹುತ?.... ಊಂ.... ಇದೇ ಕಾರಿನಲ್ಲೇ ನನ್ನ ಮದುವೆ ಮೆರವಣಿಗೆ ಆದದ್ದು" ಅಂತ ಹೇಳಿದರಂತೆ.

* * *

ಲೋ! ಸುಳ್ಳು ಹೇಳದೆ ಜಗಳ ಆಡದೆ ಒಳ್ಳೆಯವನಾಗಿದ್ದರೆ, ವೈಕುಂಠಕ್ಕೆ ಹೋಗ ಬಹುದು, ಅಲ್ಲವೇನೋ?

ಹುಂ.

ಸುಳ್ಳು ಹೇಳಿದರೆ.

ನರಕಕ್ಕೆ ಕಳುಹಿಸುತ್ತಾರೆ.

ಹಾಗಾದರೆ, ನಿಜ ಹೇಳಿ ವೈಕುಂಠಕ್ಕೆ ಹೋಗುವುದಕ್ಕೆ ಪ್ರಯತ್ನಪಡು.

ಬೇಡ, ಅಪ್ಪ.... ನಾನು ನಿನ್ನ ಜತೆಯಲ್ಲೇ ಇರುತ್ತೇನೆ.

* * *

ಬಾರೋ ಶೀನಾ! ಹೋಟಲಿಗೆ ಹೋಗೋಣ. ಹತ್ತು ವರ್ಷವಾಯಿತಲ್ಲಾ ನಾವೊಬ್ಬರನ್ನೊಬ್ಬರು ನೋಡಿ! ಬಾ! ಹೋಗೋಣ. ನಿನಗೆ ಚಾಕರಿ ಎಲ್ಲಿ? ಮನೆ ಎಲ್ಲಿ? ಮಕ್ಕಳೆಷ್ಟು? ಬಾ, ಅಲ್ಲಿ ಕೂತುಕೊಂಡು ಮಾತನಾಡೋಣ.

ಬರ್ತೀನೆ, ನಾಣಿ! ಆದರೆ, ಜ್ಞಾಪಕವಿರಲಿ! ಹಿಂದಿನ ಸಾರಿ ನಾನೇ ದುಡ್ಡು ಕೊಟ್ಟದ್ದು, ಕಾಲೇಜ್ ರೆಸ್ಟಾರೆಂಟಿಗೆ! ಈಗ ನಿನ್ನದು ಸರದಿ!

* * *

ತನ್ನ ಕಂಬಳಿಯನ್ನು ಕಳೆದುಕೊಂಡ ಕೈದಿ ಜೆಯಿಲು ಸೂಪ್ರೇಂಡರ ಹತ್ತಿರ

ಬಂದು, "ಸಾರ್! ಈ ಜೇಬಿನೊಳಗೆ ಒಬ್ಬ ಕಳ್ಳ ಸೇರಿಕೊಂಡಿದ್ದಾನೆ, ಸಾರ್."

* * *

ಗ್ರಂಥಕರ್ತರೊಬ್ಬರು ವಿಮರ್ಶಕರ ಮನೆಗೆ ಬಂದರು. ಮಾತುಕತೆ ನಡೆಯಿತು; ಮುಗಿಯಿತು. ಗ್ರಂಥಕರ್ತರೆದ್ದರು. "ಒಟ್ಟಿನಲ್ಲಿ ನನ್ನ ಪುಸ್ತಕದ ಹೆಸರು ಸಮರ್ಪಕವಾಗಿಲ್ಲವೆಂಬುದು ನಿಮ್ಮ ಟೀಕೆ" ಎಂದರು. ವಿಮರ್ಶಕರು "ಹೌದು" ಅಂದರು. "ಆದರೆ, ಆ ಹೆಸರು ಚೆನ್ನಾಗಿದೆಯಲ್ಲಾ!" ಅಂದರು ಗ್ರಂಥಕರ್ತರು. "ಚೆನ್ನಾಗಿದೆ; ಅಂತಹ ಹೆಸರನ್ನ ಈ ಪುಸ್ತಕಕ್ಕೆ ಕೊಟ್ಟು ........" ಅಂತ ಮುಗಿಸುವುದರೊಳಗಾಗಿ ಗ್ರಂ. ಕ. ರು ಕಂಬಿ ಕಿತ್ತಿದ್ದರು.

* * *

"ಸಾರ್! ಈ ನಾಟಕದಲ್ಲಿ ನಾನು ಎಷ್ಟು ಸಾರಿ ಮಾತನಾಡಬೇಕು? ಪೂರ್ತ ಗಟ್ಟಿ ಮಾಡಬೇಕಾದ್ದಿದೆಯೇನು?"

"ಇಲ್ಲ, ಕಣೋ! ನಿನಗೆ ಮಾತೇ ಇಲ್ಲ....ನಿನಗೆ ನಾನು ಕೊಟ್ಟಿರುವುದು ಮನೆ ಯಜಮಾನನ ಪಾರ್ಟು....ಗೊತ್ತಾಯಿತೆ?"



"ಬಾಯಿ ಮುಚ್ಚಿಸಿಬಿಟ್ಟು ಹೊಟ್ಟೆಯಮೇಲೆ ಹೊಡೆಯಬೇಡಿ, ದೇವರು!"

# ನನ್ನ ಕರೀ ಸೀರೆ

ಅದೊಂದು ಥೇಟ್ ಹಳ್ಳಿ. ಘನವಾದೊಂದು ಗುಡಿಯನ್ನು ಬಿಟ್ಟರೆ ಇನ್ನೇನೂ ಇಲ್ಲ. ಅದರಲ್ಲಿ! ಸಿನಿಮಾ ಇಲ್ಲ; ಹೋಟಲು ಇಲ್ಲ; ಸರಿಯಾದ ಒಂದು ಟಾಂಗಾ ಕೂಡ ಇಲ್ಲ. ಆದರೆ ಗುಡಿಯೊಂದಿತ್ತಲ್ಲ! ಪರಿಚಿತ ಮಿತ್ರರ ಮನೆಯಲ್ಲಿ ಮೊಕ್ಕಾಂ ಮಾಡಿ ದೇವಸ್ಥಾನ ನೋಡಿಕೊಂಡು ಮರುದಿನ ಹೊರಡುವುದು ಅಂದುಕೊಂಡು ಅವರ ಮನೆ ಪತ್ತೆ ಮಾಡುತ್ತಾ ಹೊರಟೆವು. ವು ಅಂದರೆ, 'ಅವರೂ', ನಾನೂ.

ಮಿತ್ರರು ಅಂದರೆ, ಹೀಗೆ! ಆತ ತನ್ನ ತಂದೆಯ ಕಣ್ಣಿನ ಚಿಕಿತ್ಸೆಗಾಗಿ ಧಾರವಾಡದ ಕಡೆಯಿಂದ ವಿಕ್ಟೋರಿಯಾ ಆಸ್ಪತ್ರೆಯಿದ್ದ ಬೆಂಗಳೂರಿಗೆ ಬಂದಾಗ ನಮ್ಮ ಪಕ್ಕದ ಮನೆ ಔಟ್‌ಹೌಸಿನಲ್ಲಿ ವಾಸವಾಗಿದ್ದರು. ಆಗ ಆತನ ಪರಿಚಯು 'ಅವರಿಗೆ' ಲಭಿಸಿತು. "ನೋಡುತ್ತಿರು! ಎಷ್ಟು ಉಪಚಾರ ಮಾಡ್ತಾರೆ ಅಂತಿ! ಅವರ ಮನೆಯಲ್ಲಿ ಕೈ ತೊಳೆಯುವುದು ಚಹಾದಲ್ಲೇ ಅಂತೆ! ಚಪಾತಿ ಪೋಳಿ ದಶಮಿ ನೂರು ಗಟ್ಟಲೆ ಮಾಡುತ್ತಾರೆ! ಶ್ರೀಖಂಡ ಬಿಸ್ಕಿಟಂತೂ ವಾರಕ್ಕೊಮ್ಮೆ ಇದ್ದೇ ತೀರಬೇಕಂತೆ" ಅಂದರು. "ನೋಡುತ್ತಿರು! ಒಂದೇ ದಿನಕ್ಕೆ ಅವರು ನಮ್ಮನ್ನು ಬಿಟ್ಟುಕೊಡೋದೇ ಇಲ್ಲ" ಅಂದರು.

ಹಸಿದಿದ್ದ ನಾನು ಸವಿಗನಸು ಕಾಣುತ್ತಿದ್ದೆ. ಬೇಗಬೇಗ ನಡೆದೆ. ಮನೆ ಸಿಕ್ಕಿತು! ಆವರಣದ ಹತ್ತಿರ ಆಳೊಬ್ಬ ನಿಂತಿದ್ದ. "ನಿಮ್ಮ ಬುದ್ಧಿಯವರು ಮನೆಯಲ್ಲಿದಾರೇನೋ, ಮತ್ತೆ" ಅಂದಾಗ, ಕಕ್ಕಾಬಿಕ್ಕಾದವನಂತೆ, "ಸಂತಿ ಬಾಜಾರಕ್ಕೆ ಇದೇ ಈಗ ಹೊಂಟಾರೆ ಕಾಕಾ ಧಣ್ಯೇರು! ಹೊಂಟು ಎರಡು ಮಿನೀಟು ತೀರಿಲ್ಲ ಸುದಾ" ಅಂತ ಗಡಬಡಿಸಿದ. ಆಗ 'ಅವರು', "ಹಾಗಿದ್ದರೆ, ನಾನು ಸಂತೆ ಕಡೆ ಹೋಗಿ ಆತನ್ನ ಹುಡುಕಿಕೊಂಡು ಬರುತ್ತೇನೆ! ನೀನು ಒಳಗೆ ಹೋಗು" ಅಂದರು. "ಒಳಗೆ ಹೋಗು! ಅಂದರೆ? ನನಗೆ ಯಾರ ಗುರುತೂ ಇಲ್ಲ! ಹೋಗೋದು ಹ್ಯಾಗೆ!" ಅಂದೆ. "ಹೋಗೇ ಸುಮ್ಮಗೆ! ಹೆಂಗಸರ ಗುರ್ತು ಮಾಡಿಕೊ!" ಅಂತ ನಡೆದೇಬಿಟ್ಟರು, ಆಳನ್ನೂ ಕರೆದುಕೊಂಡು.

ಹೊಸ್ತಿಲಬಳಿ ಸೇರುವಹೊತ್ತಿಗೆ ನನಗೆ ಸಾಕುಬೇಕಾಯಿತು. ಸುಮಾರು ಹತ್ತು ವರ್ಷದ ಹುಡುಗ ಹಾಗೆ ಹೀಗೆ ಅಡ್ಡಾಡಿ ಒಳಕ್ಕೆ ಹೋದ. ವಿಚಾರ ತಿಳಿಸಾನು ಅಂತ ಇದ್ದರೆ ಮತ್ತೆ ಹೊರಬಂದು ಮತ್ತೆ ಒಳಹೊಕ್ಕ. ಆ ಹೈದನ ಅಂತರ್ಧಾನ ಪ್ರತ್ಯಕ್ಷ ನೋಡಿ ಬೇಸರಕ್ಕಿಟ್ಟು, ನಾನು, ಅವನು ಬಂದ ಸಮಯ ನೋಡಿ, "ಲೋ! ಒಳಗೆ ನಿಮ್ಮ ತಾಯಿ ಇದಾರೆಯೇ?" ಅಂದೆ. ಹುಡುಗ ಪೀಪಿ ಊದಿದ. ಮೂರು ನಾಲ್ಕು ಸಿಳ್ಳೆ ಹಾಕಿ, "ಇಲ್ಲ" ಅಂದ.

ಅಕ್ಕ?

ಇಲ್ಲ.

ಮತ್ತೆ ಯಾರಿದಾರೆ?

ಅವ್ವ !

ಅವರನ್ನ ಕೊಂಚ ಬರಹೇಳಪ್ಪ !

?....ಉತ್ತರವಾಗಿ ಅವನು ಪೀಪಿ ಊದಿದ.

ಆಮೇಲೆ ಊದುವಿಯಂತೆ! ಮೊದಲು ಆಕೆಯನ್ನು ಕೂಗು! ಅದಕ್ಕವನು ಜೋರಿಲೆ, "ಅವ್ವಾ" "ಅವ್ವಾ" ಅಂತ ಒದರಿದ.

ಸುಮಾರು ರಿಟೈರಿಂಗ್ ವಯಸ್ಸಿನ ಮಡಿಹೆಂಗಸೊಬ್ಬರು ಬಾಗಿಲಿಗೆ ಬಂದರು. ಅಬ್ಬಾ! ಎಷ್ಟು ಎತ್ತರ! ಏನು ಲಕ್ಷಣ್ಮೈ! ಗಾಬರಿಯಿಂದ ಹುಲ್ಲುಕಡ್ಡಿಯಂತಾದೆ ನಾನು!

"ಏನವ್ವಾ! ತಂಗೀ!" ಎಂಬ ಅರಚಿಗೆ ಉತ್ತರವಾಗಿ ಸ್ಥಿತಿಗತಿಗಳನ್ನು ವಿವರಿಸಿದೆ, ಕೆಳವನಿಯಲ್ಲಿ. ಅದಕ್ಕೆ ಆ ಹುಡುಗ, "ಮುಳುಮುಳು ಅಂತ ಅನ್ನಬ್ಯಾಡ್ರಿ! ಅವ್ವನಿಗೆ ಕಿವಿ ನೆಟ್ಟಗೆ ಕೇಳಿಸೋದಿಲ್ಲ" ಅಂತ ಎಚ್ಚರಿಸಿದ. ಆಮೇಲೆ ಅದನ್ನೆಲ್ಲಾ ಮೇಲು ದನಿಯಲ್ಲೇ ಶ್ರುತಪಡಿಸಿದೆ.

ಎಷ್ಟೋ ಹೊತ್ತಾದಮೇಲೆ, "ಒಳಕ್ಕೆ ಬರ್ರಿ! ಚಾಜಯದ ಮ್ಯಾಲೆ ಕೂಡ್ರಿ" ಎಂಬ ಅಪ್ಪಣೆ ಬಂತು.

ಅಲ್ಲಿಂದಾಚೆಗೆ ಒಬ್ಬರೂ ನನ್ನ ಪರಿವೆಗೆ ಬರಲೇ ಇಲ್ಲ. ಆಕೆಯೂ ಮತ್ತೊಬ್ಬಾಕೆಯೂ ಹುರಿಗಡಲೆ ಆರಿಸಿದರು. ಅವಲಕ್ಕಿ ಕೇರಿದರು. ರಾತ್ರಿಗೆ ಒಗ್ಗರಣೆ ಅವಲಕ್ಕಿ ಮಾಡುವರೋ ಏನೋ ಅಂತ ಎಣಿಕೆ ಹಾಕಿದೆ. ಬಾಯಲ್ಲಿ ನೀರೂರಿತು. ಅವರ ಅನಾದರಣೆಯಿಂದ ನಾನು ಬಹಳ ನೊಂದೆ. ಕಡೆಗೆ, ಹಾಳಾಗಿಹೋಗಲಿ, 'ಸೀಸೀ' ಮಾಡಿ ನೋಡುವ ಅಂತ ಕೊಂಚ ಹತ್ತಿರಕ್ಕೆ ಸರಿದೆ.

"ಈ ಹುಡುಗ ನಿಮ್ಮ ಮೊಮ್ಮಗ ತಾನೆ?"

"ಹೌಂದು! ದಾವೂರವ್ಮಾ ನಿಮ್ಮದು?"

"ಮೈಸೂರು! ಅ....ಅಜ್ಜೀ....ಅಲ್ಲ....ಅವ್ವಾ."

"ಅವ್ವ ಅಪ್ಪ ಹಾರೇ?"

"(ಅವ್ವ ಅಪ್ಪ ಹಾರೇ?....!!....ಏನು ವಿಚಿತ್ರ ಇದು?)....ಹೂಂ. ಇದಾರೆ."

"ಗುಡಿ ನೋಡ್ಲಿಕೇಂತ ಬಂದಿಹೇನು ಮತ್ತ?"

"ಹೌದು!........ಈ ಮನೆ ನಿಮ್ಮದೇ ಏನು?"

"ಅಯ್ಯ! ಮನಿಗಿನಿ ನಮ್ಮದು ಹ್ಯಾಂಗಾದೀತು? ಖೋಡಿ ಸೊಸೇರು ಇದ್ದ ಮ್ಯಾಲೆ? ನನ್ನದೂಂತ ಏನಾರಾ ಉಳಿದದೇನು? ಹೌದಲ್ಲೇ ಕಾಸಕ್ಕ?"

"ಆ ಹುಡುಗ ನಿಮ್ಮ ಮೊಮ್ಮಗ ತಾನೆ?"

"ಮೊಮ್ಮಗ ಅಂತ ಎಷ್ಟು ಸಲ ಹೇಳಲೇ ನಮ್ಮವ್ವ! ನನ್ನ ಸೊಸಿ ಮಗ, ಅವ."

"ಅವನನ್ನ ನೋಡಿ ನನ್ನ ತಮ್ಮನ ಜ್ಞಾಪಕ ಬಂತು."

"ಹಿಂಗೇನು? ಎಷ್ಟು ಮಂದಿ ತಮ್ಮಂದಿರು ಹಾರೆ?"

"ಇಬ್ಬರು! ನೋಡಿ, ಭಾಳ ಚಾಲೂಕು ಹುಡುಗ, ನನ್ನ ತಮ್ಮ. ಎಲ್.ಎಸ್. ಪರೀಕ್ಷೆಗೆ ಈ ವರ್ಷ ಕೂಡ್ತಾನೆ. ನಾನು ಬಿ.ಎ.ಗೆ ಓದುತ್ತಿದ್ದಾಗ ಎರಡನೇ ತಮ್ಮ ಹುಟ್ಟಿದ....ಈಗ ಅವನಿಗೆ ಮೂರು ವರ್ಷ."

"ಹಂಗಾರೆ ನೀ ಬಿ.ಎ. ಪಾಸಾಗೀಯೇನು?" ಅಂತ ಮುದುಕಿ ಕೇಳಿದಳು. ಆದರೆ, ಎಂತಹ ಸ್ವರದಲ್ಲಿ ಗೊತ್ತೆ? "ನಿನ್ನ ಕೈ ಸೆಗಣಿ ಆಗಿದೆಯೇನು?" ಎಂಬ ಸ್ವರ ದಲ್ಲಿ! ನಾನು ಗ್ರಾಜುಯೇಟ್ ಅಂದರೆ ಮುದುಕಿ ಮೆಹರ್ಬಾನೆ ಮಾಡಬಹುದು ಅಂತ ಮಾಡಿದ್ದು ತದ್ವಿಪರೀತವಾಯಿತು!

"ಮಡಮ್ಯಾಗೀಯೇನು ನೀ?"

"ಇಲ್ಲ ಅಜ್....ಅವ್ವಾ."

"ಮತ್ತ ಸುಮ್ಮನೆ ಕಲಿತೇನು ಮಾಡಿದಿ! ಬಿಡು ಹಂಗಾರ."

ನಾನು ಜಂಬ ಕೊಚ್ಚಿದ್ದು ಪೂರಕವಾಗುವುದರ ಬದಲು ಮಾರಕವಾಯಿತು. ಮುದುಕಿಯರು ಮತ್ತೆ ನನ್ನನ್ನ ಚ ಚು ಅಂತ ಮಾತನಾಡಿಸಲೇ ಇಲ್ಲ.... ಅವರು ಆಡುತ್ತಿದ್ದ ಮಾತಿನಿಂದ 'ಅವರ' ಗುರುತಿನ ಮಿತ್ರ, ಮನೆ ಯಜಮಾನ ಪುತ್ರ, ಯಜ ಮಾನಿ ಇಬ್ಬರೂ ಪರಸ್ಥಳ 'ಹೋಗ್ಯಾರ' ಎಂದೂ, "ಸಂತಿ"ಗೆ ಹೋಗಿದ್ದಾತ ಆಕೆಯ ತಮ್ಮ ವಿನಾಯಕ ಕಾಕನೆಂದೂ ತಿಳಿಯಿತು. ಅಷ್ಟರೊಳಗೆ ಅವರೇ ಬಂದರು. ನಾವು ಪರಿಸೆ ನೋಡುವುದಕ್ಕೆ ಅವರ ಹಿಂದೆಯೇ ಆಗಲೇ ಹೊರಟೆವು. ಸುತ್ತಿಕೊಂಡು ಮನೆ ಸೇರುವ ಹೊತ್ತಿಗೆ ಹಸಿದ ತೋಳಗಳಾಗಿದ್ದುವು.

ಕಾಕಾರವರು "ಉಟಕ್ಕೇಳ್ರಿ" ಅನ್ನುವುದೇ ತಡ ಊಟದಮನೆ ಕಡೆ ಧಾವಿಸಿ ದುವು. ಹೊಸ್ತಿಲು ಮೆಟ್ಟಿದೆ; ಮುದುಕಿ ಅಡ್ಡ ಬಂದಳು! "ಕುಂಜೀ ಧೋತ್ರ ಕೊಡಲ್ಯಾ?" ಅಂತ ಕೇಳಿದಳು. ನನಗೆ ಗಾಬರಿ ಆಯಿತು. "ಯಾಕೆ?" ಅಂದೆ. ಉಟ್ಕೊಂಡು ಊಟಮಾಡಲಿಕ್ಕೆ."

ದೇವರೇ! ಧೋತ್ರ ಪಂಚೆ ಉಟ್ಕೊಂಡು ಊಟ! ಅದೂ ಇನ್ನೊಬ್ಬರದು!.... ಇಂಥಾ ಪೇಚಿನಲ್ಲಿ ನಾನೆಂದೂ ಸಿಕ್ಕಿಬಿದ್ದಿರಲಿಲ್ಲ! ಧೈರ್ಯ ತಳೆದು, ಹೇಳಿದೆ, "ಇಲ್ಲವ್ವಾ! ನಮ್ಮಲ್ಲಿ ಈತರ ಪದ್ಧತಿ ಇಲ್ಲ – ಶಿವ ಶಿವ – ನಾನು ಈತರ ಕೇಳೇ ಇಲ್ಲ – ಬೇಡ್ರಿ ನಿಮ್ಮ ಧೋತ್ರ" ಅಂದೆ.

"ಸರಿ, ಹಂಗಾರ! ಇಲ್ಲೇ ಕೂಡ್ರು ಊಟಕ್ಕೆ. ಕಟ್ಟೇಮ್ಯಾಲೆ ತಂಬಿಗಿ ಇಟ್ಟೇನಿ. ಕಾಲ್ ತೊಳಕ್ಕೊಂಡ್ಬಾ....ಅಂದರ ಬಚ್ಚಲಮನೆಗೆ ಹೋಗುಬ್ಯಾಡ ತಂಗೀ ಮತ್ತ."

ಊಟದಮನೆ ಹೊರಗೆ....ನನ್ನ! ಅಲ್ಲೇ ಕುಕ್ಕರಿಸಿದೆ. ಅಡಿಗೆ ಬಡಿಸಿದರು. ಅನ್ನ, ಆಮಟೀ, ಬೆಳಗಿನ ಭಕ್ರಿ, ಭಕ್ಕರಿ ಖಂಡತುಂಡಾಗಿ ಹಲ್ಲನ್ನೆಲ್ಲಾ ತುಂಡಿಸು ವಂತಿತ್ತು. ಆ ಅವಲಕ್ಕಿ ಕೊಬ್ಬರಿ ಎಲ್ಲವೂ ಏನಾದುವೋ ಎಂದು ಅಚ್ಚರಿಪಟ್ಟಿತು. ನಾಲಿಗೆ....ಊಟ ಮುಗಿಯಿತು....ಗಂಡಸರ ತಾಟು ಬಟ್ಟಲನ್ನು ಅಡಿಗೆಯವ ಶುದ್ಧಿ ಮಾಡಲು ತೆಗಿದುಕೊಂಡು ಹೋದ. "ಎಲೆ ಬಿಸಾಡಿ, ಹಿಂದಾಗಡೆ ಗೋಮಯ

ಹೆಚ್ಚು! ಪರಂತು ಬಚ್ಚಲುಮನ್ಯಾಗೆ ಹೋಗಬೇಡ - ಇಲ್ಲೇ ನೀರಿಟ್ಟೇನಿ - ಕೈ ತೊಳೆದು ಹಿಂದಾಗಡೆ ತಂಬಿಗಿ ಜೋರಲಿಡು.''

ನನಗೆ ಸಿಟ್ಟು ಉರಿದು ಬಂತು. ಸ್ವಾಭಿಮಾನ ಹೇಳಿತು: ''ಛೆ! ಈಗಲೇ 'ಅವರನ್ನು' ಹೊರಡಿಸು. ಗುಡಿ ಎಲ್ಲಾದರೂ ಹೋಗಲಿ - ಮೊದಲು ರೈಲು ಹತ್ತಿ ಹೊರಡಿ'' ಅಂತ. ತಾಳ್ಮೆ ಹೇಳಿತು: ''ಬೇಡ! ಇದೂ ಒಂದು ಮಜಾ! ಇಷ್ಟು ಖರ್ಚುಮಾಡಿಕೊಂಡು ಬಂದಮೇಲೆ.......''

ಅರ್ಧ ತಾಸಿನ ನಂತರ ಅವರು ಹೇಳಿದಂತೆ ನಡುಮನೆಯಲ್ಲಿ ಹಾಸಿಗೆ ಉರುಳಿಸಿ ಮಲಗಿದೆವು. ಪಕ್ಕದ ಕೋಣೆಯ ಅರೆಮುಚ್ಚಿದ ಬಾಗಿಲಿಂದ ಕಾಕಾರವರ ಗೊರಕಾ ಧ್ವನಿ ತುಯ್ಯುತ್ತ ತುಯ್ಯುತ್ತಾ ಬರುತ್ತಿತ್ತು. ಆ ಜೋಗುಳಕ್ಕೆ ಮೈಮರೆತು, ನಿದ್ದೆ ಬಂತು.

* *

ಬೆಳಗಾಯ್ತು. ಆಗ ನನಗೆ ಒಂದು ಯೋಚನೆ ಹೊಳೆಯಿತು. ಬಹುಶಃ ನಾನು ಕಚ್ಚೆ ಹಾಕದಿರುವುದರಿಂದ ಯಾವುದೋ ಜಾತಿಯವಳು ಎಂದು ಮುದುಕಿಯರು ತಿಳಿದರೋ ಏನೋ? ಅಂತ ಯೋಚಿಸಿ, ಕಚ್ಚೆಹಾಕಿ ಸೀರೆ ಉಟ್ಟೆ. ಹಣೆ ಮಧ್ಯಕ್ಕೆ ಕುಂಕುಮ ಇಟ್ಟೆ. ಮುದುಕಿಯವರಲ್ಲಿ ಮಾತು ಬೆಳೆಸಿ ನಮ್ಮ ತಂದೇದು ದೊಡ್ಡ ಆಚಾರ್ಯ ಮನೆತನ, ಅವರು ಮತಗ್ರಂಥ ಬರೆದಿದಾರೆ, ನನ್ನ ಮಾವನವರ ತಮ್ಮ ಧಾರವಾಡದ....ವಕೀಲರು—ಎಂದೆಲ್ಲಾ ತಿಳಿಸಿದೆ. ಕಡೆಗೆ, "ಹಾಂಗೇನು? ಸುಶೀಲಾ ಬಾಯೇರ ಸೊಸಿ ಏನು?" ಎಂಬ ರಾಗ ಬಂತು. "ಆಕಿ ಹಂತಿದ್ರು ನಮ್ಮ ಭಾವೂಜಿ ಅವರ ಸೊಸಿ ಮೈಸೂರಲ್ಲಿ ಹಾರೆ! ಭಾಳೇ ಶಾಣೇ ಆಕಿ ಅಂತ! ನೆಟ್ಟಗಾತು. ನೀ ಧಾರವಾಡಕ್ಕೆ ಹೋದರ ಆಕಿಗೆ ನಾನು ನೆನಸಿದೇಂತ ಹೇಳವ್ವ - ಮತ್ತ ಮರೀಬೇಡ - ಹಾಂ!"

ಅಷ್ಟೆ! ಸ್ನಾನದಮನೆಗೆ ಮಾತ್ರ ಅಪ್ಪಣೆ ಚೀಟಿ ದೊರಕಲಿಲ್ಲ. ಗುಡಿಗೆ ಹೋಗುತ್ತ 'ಅವರನ್ನು' ಕೇಳಿದೆ: ''ನಾನು ಕೀಳು ಜಾತಿಯವಳು ಅಂತ ಇದಾರೇನು?'' ಅಂದೆ. ''ಆ ಮುದುಕೀನ ಕೇಳು ಬೇಕಾದರೆ'' ಅಂದರು. ''ನಿಮಗೆ ಹಾಸ್ಯ; ನನಗೆ ಸಂಕಟ - ನಾನೇನು ಅಷ್ಟು ಅಸಹ್ಯವಾಗಿದೇನೆಯೇ? ಉಟ್ಟಿರುವ ಬಟ್ಟೆ ಕೊಳೆಯೇ? ಸೊಗಸಾದ ಕರೀ ಧರ್ಮವರದ ಸೀರೆ - ಇಟ್ಟಿಗೆ ಗೂಡಂಚಿನ ಸೀರೆ! ಫಳಫಳ ಮಿರುಗುತ್ತಿದೆ!.... ಕಚ್ಚೇನೂ ಹಾಕಿದೀನಿ! ಪರಿಚಿತ ಸೊಸೆ! ಇಷ್ಟಾಗಿ ಮುದುಕಿ ಸ್ನಾನದ ಮನೆಗೆ—ಸ್ನಾನದ ಮನೆಗೆ—ನನ್ನನ್ನ ಬಿಡದೆಹೋದಳು. ನೀವೋ ತಣ್ಣಗಿದೀರಿ! ಊಟದ ಮನೆಯೊಳಕ್ಕೂ ಬಿಡಲಿಲ್ಲವಲ್ಲ....ಆ....'' ಅಂದೆ. ಅದಕ್ಕವರು, "ಈ ಸೀಮೆ ಗಂಡು ರಾಜ್ಯ; ಗಂಡಸರಿಗೆ ಇಲ್ಲಿ ಮನ್ನಣೆ ಹೆಚ್ಚು! ಅಂತಲೇ ನಾನು ಇಲ್ಲಿ ೧೫ ದಿನ ಇರತಕ್ಕವ'' ಅಂದರು. ನನಗೆ ರೇಗಿತು. ''ಸುಖವಾಗಿರಿ! ನಾನಂತೂ ಇದೇ ಗುಡಿಯ ಕೊಳದಲ್ಲಿ ಬಿದ್ದು ಸಾಯ್ತೀನಿ'' ಅಂದೆ.

ಕೊಳದಲ್ಲೂ ಬೀಳಲಿಲ್ಲ. ಸಾಯಲೂ ಇಲ್ಲ. ಮತ್ತೆ ಹೊರಗೆ ಕೂತು ಊಟ ಮಾಡಿ ರೈಲಿಗೆ ಹೊರಟೆವು. ಈಕಡೆಯ ಪದ್ಧತಿಯಂತೆ ಮುದುಕಿಗೆ ನಮಸ್ಕಾರ ಮಾಡಿದೆ. ಮನಃಪೂರ್ವಕವಾಗಿ ಅಲ್ಲ. ತೋರಿಸೋಣ ನಮ್ಮ ಉದಾರ ವರ್ತನೆ, ಅವರ ಜಿಗಟುತನ, ಅಂತ! "ಗಂಡುಕೂಸಿನ ತಾಯಿ ಆಗವ್ವ" ಅಂತ ಹರಸಿದಳು.

* * *

ಊರು ಸೇರಿದ ಮೇಲೆ ಮಾತಿಗೆ ಮಾತು ಬಂದಾಗ ಧಾರವಾಡದ ಗೆಳತಿಯೊಂದಿಗೆ ಎಲ್ಲಾನೂ ತಿಳಿಸಿದೆ. ಮುದುಕಿಯನ್ನು ಅಸಡ್ಡಾಳ ಮುದುಕಿ ಅಂತ ಅಲ್ಲಗಳೆದೆ. "ನೋಡೇ! ಮಾಲತಿ! ಇದೇ ಈ ಸೀರೆ ಉಟ್ಟಿದ್ದೆ. ನಾನೇನು ಅಷ್ಟು ಹೊಲಸು ಕಾಣಿಸ್ತೇನೆಯೇ? ಊಟದ ಮನೆಗೆ ಬಿಡಬಾರದಾಗಿತ್ತೆ?" ಅಂದೆ.

ಅದಕ್ಕವಳು, "ಏನು? ಇದೇ ಸೀರೆ ಉಟ್ಟಿದ್ದೆಯಾ? ನಿಜವಾಗಿಯೂ?" ಅಂದಳು.

"ಹೂ."

"ಹಾಗಿದ್ದರೆ ನಾನೊಂದು ಮಾತು ಹೇಳುತ್ತೇನೆ, ಕೇಳು. ಅವರು ಒರಟು ಮಂದಿ ಇರಬಹುದು. ಆದರೆ ನೀನು ಅನ್ನುವಷ್ಟು ಅಸಡ್ಡಾಳ ಮಂದಿ ಅಲ್ಲ. ಆದಿನ ನಿನ್ನನ್ನು ಹೊರಗಟ್ಟಲು ಕಾರಣ ಇತ್ತು."

"ಏನದು?"

"ನಿನ್ನ ಕರೀ ಸೀರೆಯೇ ನಿಜವಾದ ಅಪರಾಧಿ."

"ಕರೀ ಸೀರೆ! ಈ ಜರೀ ಸೀರೆ!"

"ಹೌದು! ಆಕಡೆ ಕರೀ ಸೀರೆ ಉಟ್ಟರೆ, ಮೈಲಿಗೆ! ಮಹಾಮಹಾ ಮೈಲಿಗೆ! ಅದಕ್ಕೇ ಆ ಮುದುಕಿ ನಿನಗೆ ಧೋತ್ರ ಉಟ್ಟು ಉಣ್ಣಲಿಕ್ಕೆ ಹೇಳಿದ್ದು!...."

"ಅದಕ್ಕೇ........!!"

* * *

**ನೀತಿ!**—ಕರೀ ಜರೀ ಸೀರೆಯಿಂದ ಅಂದವೊಂದೇ ಅಲ್ಲ, ಅನರ್ಥವಾಗುವುದೂ ಉಂಟು.

—ಎಂ. ಆರ್. ಲ.



# ಎಲ್ಲಿಹೆ?

[ಶ್ರೀಮಾನ್ ಕೃಷ್ಟಪ್ಪನವರ ಕೊಳಲದನಿಯನ್ನನುಸರಿಸಿ]

ಮಾವನ ಮನೆಗೆ ಬಂದ ಹೊಸ ಅಳಿಯನ ತಾಪತ್ರಯ,
ಹೆಂಡತಿಯ ಇರವನ್ನು ಪತ್ತೆ ಹಚ್ಚಲು—

★

ಯಾರನು ಕೇಳಲಿ ನಾ; ಎಲ್ಲಿಹೆ ನೀನೆಂದು!
ಯಾರನು ಕೇಳಿದರರಿಯರು ಎಂಬರು;
ಯಾರೂ ಅರಿಯರು! ಚಿನ್ನಾ!
ಕೇಳಲು ನಿನ್ನಾ ತಂಗಿಯನು
ನೀಲಿಯ ಸೀರೆಯ ತೋರಿದಳು!
ಕೇಳಲು ನಿನ್ನಾ ತಮ್ಮನನು
ಕೇಳಿಂದವಳನೆ ತೋರಿದನು!
ಕೇಳಲು ಗೋವನು ಕರೆಯುವಳ
'ಏನಿರಿ ಬುದ್ಧಿ ಕೆಟ್ಟಿದೆಯೋ?'
ಎನ್ನುತ ಗಹಗಹ ಗಹಿಸಿದಳು!
ನೆರೆಮನೆ ಹೈಕಳ ನಾ ಕೇಳೆ
ಕಿರಿದುವು ಹಲ್ಲನು ಸಾಲಾಗಿ
ಪಾತ್ರೆಯನುಜ್ಜುವ ಆಳಯ್ಯೋ
ನೇತ್ರವ ಮುಚ್ಚಿಯೆ ಕುಳಿತಿಹಳು.
ಮಾವನ ಕೇಳಲು, ಮಾತಿಲ್ಲ!
ಅತ್ತೆಗೆ ಲಜ್ಜೆ, ಅಳಿಯನೆಡೆ.
ಕೇಳೆ ಪಿತಾಮಹನನು ನಾನು
ಹೇಳವನು ಕಿವುಡನು ಕಿವಿತೆರೆಯ!
ಹೃದಯವ ಕೇಳಲು ಸುಮ್ಮನಿರು,
ಇಲ್ಲೇ ಇರುವಳು, ಎನ್ನುವುದು!
ಯಾರನು ಕೇಳಲಿ ನಾ; ಎಲ್ಲಿಹೆ ನೀನೆಂದು
ಯಾರನು ಕೇಳಿದರರಿಯೆನು, ಎಂಬರು,
ಯಾರೂ ಅರಿಯರು! ಚಿನ್ನಾ!
ಎನ್ನ ಮನದನ್ನಾ!

— ಬಿದಿರು.

# ಮುರಿದು ಬಿದ್ದ ಕಮಾನು



ನವರಾತ್ರಿ ಬಂತು ಅಂದರೆ ಸರಿ, ನೇಣು ಹಾಕಿಕೊಳ್ಳಬೇಕು ಅನ್ನಿಸುತ್ತದೆ, ನನಗೆ! ಯಾಕೆ ಅಂತೀರೋ? ಈ ನಂಟರಿಷ್ಟರ ಕಾಟ. ಯಾರಾರೋ ನಂಟರು, ಯಾರಾರೋ ಇಷ್ಟರು! ಹಳೇ ಮೇಷ್ಟರುಗಳು, ಒಂದೇ ಸ್ಕೂಲಿನಲ್ಲಿ ನನ್ನ ಜೊತೆ ಓದಿದವರು, ಅವರ ಪಕ್ಕದ ಮನೆಗೆ ಹೆಣ್ಣು ಕೊಟ್ಟವರು, ಅವರಲ್ಲೋ ಹೋಗಿದ್ದಾಗ ಕುಡಿಯುವುದಕ್ಕೆ ನೀರು ಮಜ್ಜಿಗೆ ಕೊಟ್ಟವರು—ಹೀಗೆ ಸಾಲುಸಾಲಾಗಿ ರೈಲ್ವೇ ಸ್ಟೇಷನಿಂದಲೂ, ಬಸ್ ಸ್ಟ್ಯಾಂಡಿನಿಂದಲೂ, ಇಂಫಂಟ್ರಿ ಸಹಿತವಾಗಿ ಬಂದು ಬೀರು ಬಿಟ್ಟರೆ, ಗತಿ ಏನು ಹೇಳಿ! ಏನೋ ಬಂದರಲ್ಲ ತಿಂದುಕೊಂಡು ಹೋಗಲಿ, ಮೂರು ಹೊತ್ತು ಅಂದರೆ, ಅದು ಸಾಲದಂತೆ. ಅವರ ಬಾಲ ಹಿಡಿದುಕೊಂಡು ನಾನೇ ತಿರುಗಬೇಕಂತೆ; ಗಂಧದೆಣ್ಣೆ ಕಾರ್ಖಾನೆ, ರೇಷ್ಮೆ ಕಾರ್ಖಾನೆ, ಚಾಮುಂಡಿ ಬೆಟ್ಟ, ಜೂ ಗಾರ್ಡನ್, ಜಗನ್ಮೋಹನ ಬಂಗಲೆ, ಎಕ್ಸಿಬಿಷನ್, ಅಂಗಡಿ ಸಾಲು, ದೇವರಾಜ ಮಾರ್ಕೆಟ್, ಟೆಕ್ನಿಕಲ್ ಇನ್ಸ್ಟಿಟ್ಯೂಟ್ ಇತ್ಯಾದಿಗಳನ್ನೆಲ್ಲಾ ನಾನೇ ತೋರಿಸಬೇಕಂತೆ. ನನ್ನ ತಾಪತ್ರಯಗಳೇ ನನಗೆ ಬೇಕಾದಷ್ಟಿವೆ; ಇದು ಬೇರೆ ಬೀಸುವ ದೊಣ್ಣೆಗಳು. ಏನೋ ಹೋಗಲಿ, ಊರೊಳಗೆ ಇರುವ ಸ್ಥಳ ತೋರಿಸಿಬಿಡೋಣ, ಸುಂಕದ ಕಟ್ಟೆಗಳಿಗಾಚೆ ಸಾಗಿಸುವ ರಾದ್ಧಾಂತವಿಲ್ಲವಲ್ಲಾ ಅಂದರೆ, ಅಲ್ಲಿಗೂ ಬಿಡರು! ಕನ್ನಂಬಾಡಿಗೆ ಬಾ, ನಂಜನಗೂಡು ಎಲ್ಲಿದೆ, ಕಡಕೊಳದ ಕಡಲೆ ತಿನ್ನಿಸು, ಗಂಜಾಂಪುರಿ ಕೊಡಿಸು, —ಇದು ಬೇರೆ!



ಕರೆದುಕೊಂಡು ಹೋಗುವಾಗ ಒಂದು ಶಿಸ್ತಿಲ್ಲ, ಕ್ರಮವಿಲ್ಲ, ಬಾಯಿಗೆ ಬ್ರೇಕಿಲ್ಲ, ಯದ್ವಾತದ್ವಾ! ಜೋಬಲ್ಲಿ ಚಿಲ್ಲರೆ ಇಲ್ಲ.

ಯಾಕೆ ಹೇಳುವುದಕ್ಕೆ ಬಂದೆ ಅಂದರೆ, ಹೋದ ವರ್ಷ ನನ್ನ ಸೋದರಮಾವನ ಪಕ್ಕದ ಮನೆಯಾತ ಹೀಗೆ ನವರಾತ್ರಿಗೆ ಮೈಸೂರಿಗೆ ವಕ್ರಿಸಿ ನನ್ನ ಹಿಡಿದುಬಿಟ್ಟಿದ್ದ. ನನ್ನ ಮನೆ ಹುಡುಕಿ ಟ್ರಂಕ್



ಹಾಸಿಗೆಗಳನ್ನು ಹೋಟಲಿಂದ ನನ್ನಲ್ಲಿಗೆ ತರುವುದಕ್ಕೆ ಮೊದಲೇ ಸದ್ಯಕ್ಕೆ ಅವನು ಊರೊಳಗಿನ ನೋಟಗಳನ್ನೆಲ್ಲಾ ಮುಗಿಸಿಬಿಟ್ಟಿದ್ದ. "ನೋಡು, ಸೋಮು! ಮೈಸೂರಲ್ಲಿ ಕಾವೇರಿ ನೀರನ್ನು ರತ್ನದ ಪುಡಿಗಳ ಮೂಲಕ ಬಿಟ್ಟು ಶುದ್ಧಿ ಮಾಡುತ್ತಾರಂತಲ್ಲ, ಅದನ್ನು ನೋಡಬೇಕಾಗಿತ್ತು" ಅಂತ ಅವನಂದಾಗ ನಾನು ಪಂಚಾಂಗ ನೋಡಿದೆ. ಇನ್ನೂ ಪಂಚಮಿ! ಹಾಗಾದರೆ, ಬೇರೆ ಇನ್ನೇನೋ ಕಾರಣವಿರಬೇಕು ಅಂದುಕೊಂಡೆ. Jewell ಜಿವೆಲ್ ಎಂಬುದು ಒಬ್ಬರ ಹೆಸರು; Jewel ಜಿವೆಲ್ ಎಂಬ ರತ್ನಸೂಚಕವಾದ ಒಂದು ಇಂಗ್ಲಿಷ್ ಪದವಲ್ಲ ಅಂತ ವಿವರಿಸಿದೆ. ಆತ ನಂಬಲಿಲ್ಲ. "ಸರಿ, ಬಿಡು! ಒಂದುವೇಳೆ ನಮ್ಮನ್ನು ಅಲ್ಲಿ ಒಳಕ್ಕೆ ಬಿಟ್ಟರೂ ಗ್ರಹಚಾರವಶಾತ್ ರತ್ನದ ಪುಡಿಗೆ ಕೈಹಾಕುವುದಕ್ಕೆ ಹಾಳು ಮನಸ್ಸು ಪ್ರೇರೇಪಿಸಿಬಿಟ್ಟರೆ ಆಮೇಲೆ ಗತಿ ಏನು?" ಅಂದರು. ನಾನು ಸುಮ್ಮನಾದೆ. ಅವರನ್ನೇ ಅರೆಗಳಿಗೆ ನೋಡುತ್ತಾ ಕುಳಿತೆ.

ಸಂಜೆ ಶ್ರೀರಂಗಪಟ್ಟಣಕ್ಕೆ ಹೊರಟೆವು. ಹೊರಡುವುದಿಲ್ಲ ಅಂತ ಬಹಳ ಹೊತ್ತು ಹಠಹಿಡಿದರು. ಏಕೆಂದರೆ, "ಕೆಟ್ಟು ಪಟ್ಟಣ ಸೇರು" ಎಂಬ ಗಾದೆ ನಿಜವಾದರೆ ತಾನು ಕೆಡದೆ ಹೇಗೆ ಹೊರಡುವುದು ಎಂಬುದೇ ಅವರ ಸಂದೇಹ. "ಪರವಾಗಿಲ್ಲ, ತಕ್ಕಮಟ್ಟಿಗೆ ಕೆಟ್ಟಿದೆ" ಎಂದು ಸಮಾಧಾನಗೊಳಿಸಿದೆ. ರೈಲಿನಿಂದ ಇಳಿದ ಕೂಡಲೇ, ದೇವಸ್ಥಾನದ ಗೋಪುರವನ್ನು ಪಶ್ಚಿಮಕ್ಕೆ ತಂದಿರಿಸಿ, ರೈಲಿನಿಂದಿಳಿದ ಕೂಡಲೇ ನೆಟ್ಟಗೆ ಒಳನುಗ್ಗಲು ಅನುಕೂಲಿಸಬೇಕಾಗಿತ್ತು ಮುಜರಾಯಿ ಇಲಾಖೆಯವರು, ಅಂದರು. ನಾನು ಅವರಿಗೆ ದೇವವಿಗ್ರಹದ ಅಂದವನ್ನು ವಿವರಿಸಿದೆ. ಸರ್ಪಶಯನ, ಹಾವಿನ ಹಾಸಿಗೆ, ಹೆಡೆಗಳ ಕೊಡೆ ಎಂದೆಲ್ಲ ಬಹಳ ಆಕರ್ಷಣೀಯವಾಗಿ ಹೇಳಿದೆ. ಆಗ ಅವರು, "ಹಾಗಾದರೆ ದೇವಸ್ಥಾನದ ಒಳಕ್ಕೆ ಹೋಗುವುದು ಬೇಡ" ಅಂದರು. "ದೇವರು ಕೋಪಿಸಿಕೊಳ್ಳುತ್ತಾರೆ; ಮಲಗಿರುವಾಗ ನಾವು ಹೋಗಿ ಎಬ್ಬಿಸಬಾರದು. ತೆಂಗಿನ ಕಾಯಿ ಒಡೆದಾಗ ಸದ್ದಾಗುವುದಿಲ್ಲವೇ? ನಿದ್ದೆ ಮಾಡುತ್ತಿರುವಾಗ ಮುಖಕ್ಕೆ ಮಂಗಳಾರತಿ ಮಾಡಬಹುದೇ? ಕಾವೇರಿ



ನದಿಯೋ ದೇವರನ್ನೆಬ್ಬಿಸಬಾರದು ಅಂತ ಬಳಸಿಕೊಂಡು ಹೋಗುವಾಗ ನನ್ನದೂ ನಿನ್ನದೂ ಏನೋ ಮಹಾದರದು?" ಅಂದು ಬಿಟ್ಟರು! "ಪಂಚಮಿ ದಿನವೂ ಕೂಡ ಹೀಗಾಗುವುದುಂಟೇ? ಹಾಗಾದರೆ ಹುಣ್ಣಿಮೆ ಹತ್ತಿರ ಬಂದಾಗ....!" ಅಂತ ಆಶ್ಚರ್ಯಪಡುತ್ತಾ ಡರ್ಜ್ ಬಳಿ ಬಂದೆ, ಅವರನ್ನೂ ಕರೆದುಕೊಂಡು. ದಿಣ್ಣೆ ಹತ್ತಿ ಶಾಸನ ಓದಿ ಮುಂದಕ್ಕೆ ಹೋಗಿ ಮೆಟ್ಟಲಿಳಿದು ಮೆಲ್ಲಗೆ ಡಂಜನೊಳಗೆ ನುಗ್ಗಬೇಕು. ದಿಣ್ಣೆ ಹತ್ತಿದೆವು. ಶಾಸನ ಓದಿದೆವು. "ಈ ಕಾರಾಗೃಹದಲ್ಲಿ ಅನೇಕ ವರ್ಷಗಳ ಕಾಲ ಟಿಪ್ಪು ಸುಲ್ತಾನರು ತಮ್ಮ ಬ್ರಿಟಿಷ್ ಕೈದಿಗಳನ್ನು ಇರಿಸಿದ್ದರು" ಎಂದು ಅವರು ಮೆಲ್ಲಗೆ ಓದಿದರು. ಓದುತ್ತಾ ಓದುತ್ತಾ ನನ್ನ ಕೈಯನ್ನು ಬಿಗಿಯಾಗಿ ಹಿಡಿದರು. ಅವರ ಕಣ್ಣುಗಳೆರಡೂ ಅರಳಿದುವು. ಶಾಸನದ ಪಕ್ಕದಲ್ಲೇ ಗೋಡೆಯಲ್ಲಿ ಕೋವಿಗಳನ್ನಿಡಲು ಮಾಡಿದ್ದ ಸಣ್ಣದೊಂದು ತೂತು ಅವರ ಕಣ್ಣಿಗೆ ಬಿತ್ತು. "ಏನು! ಇದರೊಳಗೆ ಇರಿಸಿದ್ದರೇ?"ಎಂದು ಕೇಳಿದರು. ನನಗೆ ನಗು ಬಂತು. ಅವರು ಅಲ್ಲೇ ಮಂಡಿ ಊರಿ ಕುಳಿತು ಆ ರಂಧ್ರ ಪನ್ನೇ ದುರದುರನೆ ನೋಡಿದರು. "ಅಯ್ಯೋ, ಇದರೊಳಗೆ....ಅನೇಕ ವರ್ಷಗಳ ಕಾಲ...." ಅಂತ ಕಂಬನಿ ಸುರಿಸುತ್ತಾ ಅವರಿದ್ದರು. ನಾನೂ ಅವರನ್ನು ಹಿಂಬಾಲಿಸಿದೆ. ಇಲ್ಲಿ ಗೇಟಿನೊಳಕ್ಕೆ ಬರುವುದಿಲ್ಲವೆಂದು ಹಟ ಹಿಡಿದರೆ, ಅದರಾಚೆ ವೈಸ್ರಾಯರು ಕೂತಿರುತ್ತಾರಂತೆ! ಕಡೆಗೆ, ಮುರಿದು ಬಿದ್ದಿರುವ ದಿ ಹ್ಯಾವಿಲಾಂಡ್ ಕಮಾನಿನ ಕಳಿ ಕರೆದುಕೊಂಡು ಹೋದೆ. ಶ್ರೀರಂಗಪಟ್ಟಣಕ್ಕೆ ಬಂದಮೇಲೆ ಅದನ್ನು ನೋಡದೆ ಹಿಂತಿರುಗುವದು ಮಹಾಪರಾಧವೆಂಬುದು ನನ್ನ ಸಿದ್ಧಾಂತ. ಏಕೆಂದರೆ ನಾನು ಅದರ ಮೇಲೆ ನಿಂತು ಕುಣಿದ



ಮಾರನೆಯ ದಿನ ಬೆಳಿಗ್ಗೆ ಅದು ಕುಸಿದು ಬಿತ್ತು. ಆದ್ದರಿಂದ ನನ್ನ ದೇಹಬಲದ ಕುರುಹು ಅದು ಎಂದು ನಾನು ಭಾವಿಸುತ್ತೇನೆ. ದೂರದಲ್ಲೇ ನಾನು ಅವರನ್ನು ನಿಲ್ಲಿಸಿ, ನನ್ನ ಪ್ರಭಾವವನ್ನು ಮರೆಮಾಚಿ, ಕಮಾನು ಮುರಿದು ಬಿದ್ದಿರುವುದನ್ನು ತೋರಿಸಿದೆ. ಹಿಂದೆ ಅದು ಹೇಗೆ ರಾರಾಜಿಸುತ್ತಿತ್ತು ಎಂದು ವಿವರಿಸಿದೆ.

ಆಗ ಅವರು ನೆಟ್ಟಗೆ ಸ್ಟೇಷನ್ ಕಡೆಗೆ ಓಡಲಾರಂಭಿಸಿದರು. "ನಾನಲ್ಲ ಸ್ವಾಮಿ, ಕಮಾನು ಬೀಳಿಸಿದ್ದು" ಎಂದು ಕೂಗಿಕೊಂಡೆ. ಸ್ಟೇಷನ್ ಮೇಷ್ಟರ ಕೊಠಡಿಯೊಳಕ್ಕೆ ನುಗ್ಗಿದರು. "ನಾನಲ್ಲ ಸ್ವಾಮಿ! ನಾನು ಅಲ್ಲಿ ಹೋದಾಗ ಅದು ಮುರಿದು ಬಿದ್ದಿತ್ತು, ಸ್ವಾಮಿ! ನನಗೆ ಗೊತ್ತಿಲ್ಲ ಸ್ವಾಮಿ! ಬಡವ, ಸ್ವಾಮಿ! ಮಕ್ಕಳೊಂದಿಗ ಸ್ವಾಮಿ!" ಅಂತ ಒಂದೇ ಸಮನೆ ಗೋಳಾಡುತ್ತಾ, ರೈಲ್ವೇ ಗಾಡಿಯಲ್ಲಿ ಕುಳಿತರು.

ಮನೆಗೆ ಬಂದ ಮೇಲೆ ನೆಲ್ಲಿಕಾಯಿ ಗಿಲ್ಲಿಕಾಯಿ ಕಟ್ಟಿದೆ. ಅವರ ಊರಿಗೆ ಕಾಗದ ಬರೆದೆ. ಯಾರೋ ಬಂದು ಅರಸೀಕೆರೆ ದಾರಿ ಮೇಲೆ ಬೆಂಗಳೂರಿಗೆ ಕರೆದುಕೊಂಡು ಹೋದರು.

— ಸೋಮು.

# ಸಂಪಾದಕೀಯ

ಇಂದಿಗೆ ಕೊರವಂಜಿಯು ಹೊರಗೆ ಬಿದ್ದು ಒಂದು ವರ್ಷ ಆಗಿಯೇ ಹೋಯಿತು. ಯುದ್ಧಕಾಲದ ಮನೆಗಳಂತೆ, ಮದುವೆಗಳಂತೆ ಮಕ್ಕಳೂ ಕೂಡ ಬಾಲಗ್ರಹ ಪೀಡಿತರಾಗುವುದು ಸಾಮಾನ್ಯವಾದುದೇ ಹೌದು. ಆದರೂ ಕೆಲವು ಮಕ್ಕಳು ಹೊರಗಿನವರ ಪ್ರೀತಿ ಆದರಣೆಗಳಿಂದ ಬೆಳೆದು ಬರುವುದೂ ಉಂಟು. ಕೊರವಂಜಿಯು ಯುದ್ಧ ಶಿಶುವಾದರೂ ಈ ರೀತಿ ಸುಗಮವಾಗಿ ಬೆಳೆದು ಬಂದುದು ಓದುಗರ ಪ್ರೀತಿ ಆದರಣೆಗಳಿಂದ, ಜಾಹೀರಾತುಗಾರರ ಸಹಾಯದಿಂದ, ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ಕೇಳಿಕೆಗೆ ಮನ್ನಣೆ ಇತ್ತು ಲೇಖನಗಳನ್ನು ಬರೆದ ಹಿರಿಯ ಕಿರಿಯ ಸಾಹಿತಿಗಳಿಂದ.

ಕಾಗದದ ಮುಗ್ಗಟ್ಟು ಹೆಚ್ಚುತ್ತ ಬಂದಿದೆ. ಅಚ್ಚಿನ ಸಾಮಾನುಗಳು ಬಲು ಪ್ರಿಯವಾಗುತ್ತಿದೆ. ಈ ವರ್ಷ ಸುಗಮವಾಗಿ ಬೆಳೆಯಬೇಕಾದರೆ ಸರ್ವತ್ರ ಸಹಾಯವು ದೊರೆಯಲೇಬೇಕು. ನಮಗೂ ಒಂದು ತರಹ ಕೆಚ್ಚು. ಜನಾದರಣೀಯವಾಗಿದ್ದರೆ ಬೆಳೆದು ಬಾಳಲಿ. ಅದಿಲ್ಲದಿದ್ದರೆ ಕೊರವಂಜಿಯು ಇದ್ದೂ ಸುಖವಿಲ್ಲ. ಹಾಗಾಗಿ ಅದು ಕಣ್ಣು ಮುಚ್ಚಿಕೊಂಡರೆ ದುಃಖವೂ ಇರಬಾರದು.

ನಮಗೇನೋ ಧೈರ್ಯ. ಹಾಗಾಗುವುದಿಲ್ಲವೆಂದು.

ಓದುಗರಿಗೆ, ಲೇಖಕರಿಗೆ, ವ್ಯಂಗ್ಯಚಿತ್ರ ಶಿಲ್ಪಿಗಳಿಗೆ, ಜಾಹೀರಾತುದಾರರಿಗೆ, ಎಲ್ಲರಿಗೂ ಬರುವ ವರ್ಷವು ಸುಖದಾಯಕವಾಗಲೆಂದೂ, ಶಾಂತಿಯು ದೊರಕಲೆಂದೂ ಪುನಸ್ಸಾರೆ ಪ್ರಾರ್ಥಿಸುವೆವು.

ಸರ್ವೇಜನಾಃ ಸುಖಿನೋ ಭವಂತು

ಸುಖಿಗಳಾಗಲು ಕೊರವಂಜಿಯು ಸಹಾಯ ಮಾಡಲಿ

—ಸಂಪಾದಕ.



# ಮುಂದಕ್ಕೆ ತಿರುಗಿಸಿದ ಗಡಿಯಾರ

(ಒಂದು ಕನಸರಿಕೆ)

## ದೃಶ್ಯ ೧—ರೈಲ್ವೆ ನಿಲ್ದಾಣ

"ಲೋ, ರಾಮು ! ಬೇಗ ಸಾಮಾನು ತೆಗೆದುಕೊಂಡು ಬಾರೋ, ಹೊತ್ತಾಗಿ ಹೋಯ್ತ ಹಾಗೆ ಕಾಣುತ್ತೆ."

"ಇದೋ, ಬಂದೆ ಸ್ವಾಮಿ, ಈ ಪೆಟ್ಟಿಗೆ....ಹಾಳು ಹೆಣ ಭಾರ......" ರಾಯರು (ಬೇಗ ಬೇಗ ಟಿಕೆಟ್ ಕಿಟಿಕಿ ಹತ್ತಿರ ಹೋಗಿ) "ಸಾರ್, ಸಾರ್, ತುಮಕೂರಿಗೊಂದು ಟಿಕೆಟ್ ಕೊಡಿ, ಸಾರ್."

ಒಳಗಿಂದ ಅಯ್ಯರು : "ಏನ್ರಿ, ಗಾಡಿ ಓಗಿ ಬಿಡುತ್ತೆ. ಮೂರು ನಿಮಿಷ ಅದೆ"

"ಅದಕ್ಕೇ ಸಾರ್, ಬೇಗ ಕೊಡಿ !"

"ಚಿಲ್ರೇ ಅದೆಯೋ ? ನಮ್ಮ ಕಿಟ್ಟಿ ಚಿಲ್ರೇ ಇಲ್ಲೆ...."

ರಾಯರು "ಅಯ್ಯೋ, ನನ್ನ ಹತ್ತಿರ ಚಿಲ್ಲರೆ ಇಲ್ಲವಲ್ಲಾ. "ಲೋ, ರಾಮು, ನಿನ್ನ ಹತ್ತಿರ ಇದೆಯೇನೋ ಚಿಲ್ಲರೆ ?"

ರಾಮು : "ನನ್ನ ಹತ್ತಿರ ಎಲ್ಲಿಂದ ಬರಬೇಕು ಸ್ವಾಮಿ? ನೆನ್ನೆ ಅಮ್ಮಾವರು ಒಂದು ಕಾಸೂ ಬಿಡದೆ ಲೆಕ್ಕ ಮಾಡಿ ತೆಗೆದುಕೊಳ್ಳಲಿಲ್ಲವೆ? ಆದರೂ ನೋಡುತ್ತೇನೆ." (ಜೇಬನ್ನೆಲ್ಲಾ ಹುಡುಕಿ) "ಇಲ್ಲ, ಸ್ವಾಮಿ, ಇದ್ದ ಹಾಗೆ ಇತ್ತು. ಆದರೆ ಇಲ್ಲ. ಆ ಪೋರ್ಟರ್ ಹತ್ತಿರ ಇರಬಹುದು, ತಾಳಿ ; ಕೇಳಿ ತರುತ್ತೇನೆ."

ರಾಯರು : "ಅಜೀ, ಪೋರ್ಟರ್, ಏಕ್ ರೂಪಾಯಿಕಾ ಚಿಲ್ಲರ್ ಹೈ ಕ್ಯಾ ಜೀ ?"

ಪೋರ್ಟರ್ : "ಹೈಕ್ಯಾಕೇ ದೇಖ್ನಾ, ಸಾಮೀ.....ಅರರೇ, ಸಾಡೇ ಪಂದ್ರಾ ನಾಚ್ ಹೈನಾ-ಆರು ಕಾಸು ಕಮ್ಮಿ ಐತೆ ಸಾಮೀ. ನೋಡಿ, ಕೊಡೂ ಅಂತ ಕೇಳಿದ್ರೆ...."

ರಾಯರು : ("ನಿನ್ನ ಮನೆಹಾಳಾಗ" ಎಂದು ಬೈದುಕೊಂಡು) "ಪರವಾ ನೈ, ದೇದ್ ಬಾ" ಚಿಲ್ಲರೆ ತೆಗೆದುಕೊಂಡು "ಅಯ್ಯರೆ, ಅಯ್ಯರೇ ಟಿಕೆಟ್ ಕೊಡಿ."

ಅಯ್ಯರ್, "ಚಿಲ್ರೆ ವಂದಪಾ ಕೊಡಿ."

ರಾಯರು ಟಿಕೆಟ್ ತೆಗೆದುಕೊಂಡು ಪ್ಲಾಟ್‌ಫಾರಂ ಒಳಕ್ಕೆ ನುಗ್ಗಿದರು.

ರಾಮು (ಹಿಂದುಗಡೆಯಿಂದ) "ಸ್ವಾಮೀ, ಪ್ಲಾಟ್‌ಫಾರಂ ಟಿಕೆಟ್ಟಿಲ್ಲದೆ ಒಳಗೆ ಬಿಡೋದಿಲ್ಲವಂತೆ."

ರಾಯರು ಮತ್ತೆ ಹಿಂದೆ ಹೋಗಿ ಅವನ ಕೈಯಲ್ಲಿ ಒಂದಾಣೆ ಕೊಟ್ಟು "ಟಿಕೆಟ್ ತೆಗೆದುಕೊಂಡು ಬೇಗ ಬಾ ; ನಾನು ಹೋಗಿ ಜಾಗ ನೋಡುತ್ತೇನೆ. ಇಂಜಿನ್ ಹತ್ತಿರದ ಗಾಡಿ ಬಳಿ ಬಾ....ಅಲ್ಲಿ ಜಾಗ ಇರುತ್ತೆ...." ಎನ್ನುತ್ತಾ ಓಡುವರು.

ಅಷ್ಟು ಹೊತ್ತಿಗೆ ಸರಿಯಾಗಿ ಗಾರ್ಡ್ ಸಿಳ್ಳು ಹೊಡೆದು ಹಸುರು ಬಾವುಟ ಆಡ್ಡಿಸುವನು. ರೈಲು ಮುಂದಕ್ಕೆ ಹೊರಡುವುದು. ರಾಯರು ಒಂದು ಗಾಡಿ ಒಳಕ್ಕೆ ನುಗ್ಗುವುದಕ್ಕೆ ಯತ್ನಿಸುವರು. ಒಳಗಿದ್ದವರು ಬಾಗಿಲಿಗೆ ಅಡ್ಡಲಾಗಿ ನಿಂತು ಅವರನ್ನು ಹೊರಕ್ಕೆ ದೂಡಿ, ಬಾಗಿಲು ಹಾಕುತ್ತಾ "ಬೇರೆ ಗಾಡಿಗೆ ಹೋಗ್ರಿ, ಇಲ್ಲಿ ಜಾಗ ಇಲ್ಲ. ಅಲ್ಲೆಲ್ಲಾ ಜೋಸ್ತಾಗಿ ಖಾಲಿ ಇದೆ...."

ರಾಯರು ಅವಸರದಿಂದ ಮತ್ತೊಂದು ಗಾಡಿಗೆ ನುಗ್ಗುವರು. ಪೋರ್ಟರು "ಸಾರ್. ಅದು ಸೆಕೆಂಡ್ ಕ್ಲಾಸ್ ಸಾರ್" ಎಂದು ಕೂಗುವನು.

ರಾಯರು ಅದನ್ನೂ ಬಿಟ್ಟು ಮತ್ತೊಂದು ಗಾಡಿಗೆ ರೈಲಿನ ಬಾಲದ ಕಡೆಗೆ ಓಡುವರು. ಅಷ್ಟು ಹೊತ್ತಿಗೆ ರೈಲು ರಭಸದಿಂದ ಮುಂದೆ ಸಾಗುವುದು. ಗಾರ್ಡ್ ಗಾಡಿಯು ಕಾಣುವುದು. ಅದರ ಪಕ್ಕದಲ್ಲಿ ಹತ್ತಿಕೊಳ್ಳುವುದಕ್ಕೆಂದು ಓಡುತ್ತಿದ್ದ ಗಾರ್ಡಿನ ಪಕ್ಕದಲ್ಲಿ ರಾಯರೂ ತಿರುಗಿ, ಓಡುತ್ತಾ, ಅವನ ಅಂಗಿಯ ತೋಳನ್ನು ಹಿಡಿದುಕೊಂಡು" "ಮಿಸ್ಟರ್ ಗಾರ್ಡ್, ಮಿಸ್ಟರ್ ಗಾರ್ಡ್, ಸ್ವಲ್ಪ ತಾಳಿ, ಮಿಸ್ಟರ್ ಗಾರ್ಡ್!" ತುಮಕೂರಿಗೆ ಕೋರ್ಟಿಗೆ ಹೋಗಬೇಕು....ಅರ್ಜೆಂಟ್! ಸ್ವಲ್ಪ ತಾಳಿ, ಸಾರ್!"

ಗಾರ್ಡು "ಐಸೇ ಲೆಟ್ ಗೋ, ಬಿಡರೀ" ಎಂದು ಕೈ ಎಳೆದುಕೊಂಡು ತನ್ನ ಗಾಡಿಗೆ ಹಾರಿ ಹತ್ತಿಕೊಳ್ಳುವನು. ರಾಯರು ಹಿಂದೆ ಓಡುತ್ತಾ "ಸಾರ್, ಸಾರ್, ದಯವಿಟ್ಟು....ದಯವಿಟ್ಟು...." ಅಭ್ಯಾಸ ದೋಷದಿಂದ "ಹೋಲ್ಡಾನ್! ಹೋಲ್ಡಾನ್!" ಎಂದು ಕೂಗುವರು. ರೈಲು ಹೋಗಿಯೇ ಹೋಗುವುದು; ರಾಯರು ಕಡೆಗೆ ಏದುತ್ತಾ ನಿಲ್ಲುವರು.

ಪೋರ್ಟರ್: "ಏನ್ ಸಾಮೀ, 'ಓಲ್ಡಾನ್, ಓಲ್ಡಾನ್' ಅಂತ ಕೂಗೋಕೆ ಇದೇನು ಬಸ್ ಕೆಟ್ಟುಹೋಯಿತಾ? ಜಲ್ದಿ ಮುಂಚೇನೇ ಬರಬಾರದಾ? ಈಗ ಎಲ್ಲಾ ರೈಲೂ ಬೇಗ ಹೊರಡತೈತೆ, ಗೊತ್ತಿಲ್ವಾ? ಸಾವ್ನೆ ರಖ್ಖೊ ಹೈ ಕರಕೋ ಮಾಲೂಮೀಚ್ ನೈ?"

ರಾಯರು (ರೇಗಿನಿಂದ) "ಗಡಿಯಾರಕ್ಕೆ ಬೆಂಕಿ ಹಾಕಿತು. ಎಷ್ಟು ಬೇಗ ಬಂದರೂ ಹಾಳು ರೈಲು ಹೊರಟೇ ಹೋಯಿತು. ಇನ್ನೂ ಬೇಗ ಬರಬೇಕು ಅಂದರೆ ಯಾರ ಕೈಲಾಗುತ್ತೆ? ಅವರ ಮನೆಹಾಳಾಯಿತು!-ಇನ್ನೂ ಒಂದು ಘಂಟೆ ಮುಂದಕ್ಕಿಡಲಿ, ಬೇಕಾದರೆ ಯಾರಿಗೇನು?....ಲೋ, ರಾಮು, ಈ ಟಿಕೆಟ್ಟನ್ನಾದರೂ ವಾಪಸು ಮಾಡಿ ದುಡ್ಡಿಸುಕೊಂಡು ಬಾ. ಅವನು ಬೇರೆ ಒಂದಾಣೆ ಹಿಡಿದುಕೊಳ್ಳುತ್ತಾನೆ ಎಂದು ಕಾಣುತ್ತೆ. ಕೆಲಸ ಕೇಡು, ಬರೀ ನಷ್ಟ....ಹಾಳು ಗಡಿಯಾರ!"

## ದೃಶ್ಯ ೨—ಕುಂದಾರಾ ಕಚೇರಿಯಲ್ಲಿ

ಗುಮಾಸ್ತೆ: "ತಿಮ್ಮಯ್ಯ, ಸಾಹೇಬರು ಬಂದರೇನಪ್ಪಾ?"

ಸರಿಗೆ ರುಮಾಲು, ದವಾಲಿ ಹಾಕಿ ಠೀವಿಯಿಂದ ನಡೆಯುವ ಜವಾನ! "ಇನ್ನೂ ಇಷ್ಟು ಬೇಗ ಎಲ್ಲಿ ಬರತಾರೋ ಸ್ವಾಮೀ. ಇನ್ನೂ ಈಗ ಎರಡೇ ಘಂಟೆ. ಅಂದರೆ

ಹಳೇ ಒಂದು ಗಂಟೆ. ಊಟಮಾಡಿ ಸ್ವಲ್ಪ ಪುರಸತ್ತು ತೆಗೆದುಕೊಂಡು ತಾನೇ ಬರಬೇಕು.''

ಗುಮಾಸ್ತೆ : "ಹಳೇಘಂಟೆ, ಹೊಸಘಂಟೆ ಎಲ್ಲಿಂದ ಬಂತಯ್ಯ ?....ಈಗ ಎಲ್ಲಾ ಒಂದೇ ಘಂಟೆ ಅಲ್ಲವೇ ?....ಈ ಕಾಗದ ಬಹಳ ತುರ್ತಿನದು, ಸಾಹೇಬರ ಸಹಿಯಾಗಬೇಕು."

ತಿಮ್ಮ : "ಅಲ್ಲಿ ಮೇಜಿನ ಮೇಲೆ ಹಾಕಿ ಸ್ವಾಮಿ. ನಾನು ಸಾಹೇಬರು ಬಂದ ಮೇಲೆ ರುಜು ಹಾಕಿಸಿ ತಂದು ಕೊಡುತ್ತೇನೆ....ಅಗೋ, ಸಾಹೇಬರು ಬಂದೇಬಿಟ್ಟರು. ಸ್ವಲ್ಪ ಅರುಗಾಗಿ ಸ್ವಾಮಿ ! ಸಮಯ ನೋಡಿಕೊಂಡು ಕರೀತೇನೆ. ಇಲ್ಲದಿದ್ದರೆ ಕೋಪಿಸಿಬಿಟ್ಟಾರು ! ...."

ಸಾಹೇಬರು ಒಳಕ್ಕೆ ದಯಮಾಡಿಸಿ, ಕುರ್ಚಿಯ ಮೇಲೆ ಕುಳಿತು, ತಲೆಯ ಮೇಲಿನ ಜರತಾರಿ ರುಮಾಲನ್ನು ತೆಗೆದು ಹುಷಾರಾಗಿ ಒಂದುಕಡೆಗಿಟ್ಟು, ಕಾಲುಗಳೆರಡನ್ನೂ ಮೇಜಿನ ಕೆಳಕ್ಕೆ ಚಾಚಿ, ಆಕಾಶಮುಖರಾಗಿ ಏನನ್ನೋ ಯೋಚಿಸುತ್ತಿರುವಂತೆ ತೋರುತ್ತೆ. ದಾರಿಯ ಆಯಾಸವನ್ನು ಕಳೆಯುವುದಕ್ಕಾಗಿ ಬರುವಾಗ ಮೋಟಾರಿನಲ್ಲಿ ಸ್ವಲ್ಪ ಕುಲುಕಾಟವಾಗಿದ್ದದ್ದು ಮತ್ತಷ್ಟು ವಿಶ್ರಾಂತಿ ಹೊಂದುವರು. ಗುಮಾಸ್ತೆಯು ಹೊರಗೆ ಬಾಗಿಲಾಚೆ ನಿಂತು ಕಾಯುವನು. ಜವಾನ ತಿಮ್ಮಯ್ಯನು ಒಳಗೆ ಬಗ್ಗಿ ನೋಡಿ ಪರಿಸ್ಥಿತಿಯನ್ನು ತಿಳಿದು "ಇನ್ನೂ ಸ್ವಲ್ಪ ಹೊತ್ತು ಸುಮ್ಮನಿರಿ" ಎಂದು ಗುಮಾಸ್ತೆಗುಸುರಿ, ಬಾಗಿಲ ಹೊರಗಡೆ ಹಾಕಿದ್ದ ಸಣ್ಣ ಬೆಂಚಿನ ಮೇಲೆ ಕುಳಿತಿರುವನು. ಕೆಲವು ಯುಗಾಂತರಗಳ ಮೇಲೆ, ಒಳಗಿನಿಂದ ಸಾಹೇಬರು "ತಿಮ್ಮಾ ! "

ತಿಮ್ಮ : "ಬುದ್ಧಿ....''

ಸಾ : "ಎಲ್ಲೋ, ಆ ರೈಟರು ಏನಾದನೋ ? ಕರೆಯೋ. ರುಜು ಮಾಡುವುದಕ್ಕೆ ಏನಾದರೂ ಕಾಗದಗಳಿದ್ದರೆ ತೆಗೆದುಕೊಂಡು ಬಾ ಎಂದು ಹೇಳು."

ತಿಮ್ಮ "ಅಪ್ಪಣೆ, ಬುದ್ಧಿ." ಹೊರಗೆ ಬಂದು ಗುಮಾಸ್ತೆಗೆ "ಅಪ್ಪಣೆಯಾಗಿದೆ. ಬೇಗ ಹೋಗಿ."

ಗುಮಾಸ್ತೆಯು ಕಾಗದಗಳನ್ನು ತೆಗೆದುಕೊಂಡು ಒಳಗೆ ಹೋಗುವನು.

ಸಾ : "ಏನಯ್ಯಾ, ನಿನಗೇನು ಬುದ್ಧಿ ಇದೆಯೋ ಇಲ್ಲವೊ ? ಕಾಗದಗಳನ್ನು ತರುವುದು ಇಷ್ಟ ತಡವೆ ? ನಾನು ಅಷ್ಟು ಹೊತ್ತಿನಿಂದ ಕಾದಿರುವುದು ಗೊತ್ತಿಲ್ಲವೇ ? ಸುಮ್ಮನಿದ್ದರೆ ಹಾಗೆಯೇ, ನಿಮಗೆ....ಒಂದು ಸಲ ಜುಲ್ಮಾನೆಯೇನಾದರು ಹಾಕಿದರೆ, ಆಗ ಗೊತ್ತಾಗುತ್ತೆ.

ಗುಮಾಸ್ತೆ : "ಇಲ್ಲ, ಮಹಾಸ್ವಾಮೀ ತಪ್ಪಾಯಿತು. ಕ್ಷಮಿಸಬೇಕು. ನಾನೇನೋ ತಯಾರಾಗಿದ್ದೆ. ಆದರೆ ತಾವು....''

ಸಾ : "ಏನು ನಾನು ಬೊಗಳು."

ಗು : "ತಾವು ಬಹಳ....ಕೆಲಸವಾಗಿದ್ದಿರಿ...."

ಸಾ : 'ಓ ಹಾಗೋ ? ಹೌದು, ಹೌದು, ಇವತ್ತು ನನಗ ಬಹಳ ಕೆಲಸ. ಎಲ್ಲಿ, ಕಾಗದಗಳನ್ನು ಬೇಗ ಕೊಡು. ಒಂದು 'ಅಟ್ ಹೋಮ್' ಪಾರ್ಟಿ ಇದೆ, ಹೋಗ ಬೇಕು....ಈ ದಿವಸ ಬಹಳ ಕೆಲಸ....'' ಕಾಗದಗಳನ್ನು ಸಹಿ ಮಾಡುತ್ತಾ "ನೀವೆಲ್ಲಾ ಕಚೇರಿಗೆ ಹೊತ್ತಿಗೆ ಸರಿಯಾಗಿ ಬರಬೇಕು. ಬಂದರೆ ಕೆಲಸ ಬೇಗ ಮುಗಿಯುತ್ತೆ. ಹೀಗೆಲ್ಲಾ ಹೊತ್ತಾಗಿ ಬಂದರೆ ಆಗುವುದಿಲ್ಲ......(ಗಡಿಯಾರ ನೋಡುತ್ತಾ) ಓಹೋ ! ಗಂಟೆ ಆಗಲೇ ನಾಲ್ಕೂವರೆ ! "

ಗು : "ಅಂದರೆ, ಹಳೇ ಮೂರೂವರೆ ತಾನೆ ಮಹಾಸ್ವಾಮಿ.''

ಸಾ : "ಹಳೇವೇನು ಹೊಸದೇನು, ಎಲ್ಲಾ ಒಂದೇ ಗಂಟೇನೆ ಈಗ. ಆದರೂ, ಈ ಗಡಿಯಾರ ಮುಂದಕ್ಕೆ ತಿರುಗಿಸಿರುವುದು...." ಕೊನೆಯ ಕಾಗದವನ್ನು ರುಜು ಮಾಡಿ ಗುಮಾಸ್ತೆಯ ಕಡೆಗೆ ಎಸೆಯುತ್ತಾ "ಲೋ ತಿಮ್ಮಾ, ಹೆಡ್ ಕ್ಲಾರ್ಕನ್ನು ಮೆಮೋ ಬುಕ್ಕು ತೆಗೆದುಕೊಂಡು ಬಾ ಎಂದು ಹೇಳು."

ಹೆಡ್‌ಕ್ಲಾರ್ಕು ಮೆಮೋ ಬುಕ್ಕು ತೆಗೆದುಕೊಂಡು ಬರುವರು.

ಸಾ : "ಏನ್ರೀ, ಈ ಗಡಿಯಾರ ಮುಂದಕ್ಕಿಟ್ಟಿರುವುದು ನಮಗೇನೂ ಅನಾನು ಕೂಲವಿಲ್ಲವಷ್ಟೆ ? ''

ಹೆ. ಕ್ಲಾ : "ಸ್ವಲ್ಪ ಅನಾನುಕೂಲವೇ, ಮಹಾಸ್ವಾಮಿ.....ಬೆಳಗ್ಗೆ ಆರು ಘಂಟೆ ಎಂದು ಎದ್ದರೆ, ಆಗಲೇ ಗಡಿಯಾರದಲ್ಲಿ ಏಳು ಗಂಟೆ....ನಮಗೆ ಹಾಗಿರಲಿ, ತಮಗೆ ಬಹಳ ಅನಾನುಕೂಲ. ಅದೂ, ಈ ಕೆಲಸ ಜಾಸ್ತಿಯಾಗಿರುವ ವೇಳೆಯಲ್ಲಿ........... ಸ್ವಲ್ಪವೂ ಸ್ವಾಮಿಗೆ ಪುರಸತ್ತೇ ಇಲ್ಲ...."

ಸಾ : "ಹೌದು, ಹೌದು. ಮೆಮೋ ಬರಿಯಿರಿ, ರುಜು ಹಾಕುತ್ತೇನೆ 'ಇನ್ನು ಮೇಲೆ ಕಚೇರಿ ಹನ್ನೆರಡರಿಂದ ಐದೂವರೆ ವರೆಗೆ' ಎಂದು. ತಾಳಿ, ಇಲ್ಲದಿದ್ದರೆ, ಪುಸ್ತಕ ತೋರಿಸಿ, ರುಜು ಮಾಡಿಬಿಡುತ್ತೇನೆ, ಮೆಮೋ ಆಮೇಲೆ ಬರೆದುಕೊಳ್ಳಿ. ನನಗೆ ಹೊತ್ತಾಯಿತು, ಹೋಗಬೇಕು.''

ಹೆ. ಕ್ಲಾ : ''ಆಗಬಹುದು, ಮಹಾಸ್ವಾಮಿ." ರುಜುಮಾಡಿಸಿ ಹೊರಕ್ಕೆ ಬರುತ್ತಾ ''ತಿಮ್ಮಯ್ಯ, ಇನ್ನು ಮೇಲೆ ಕಚೇರಿ ಹನ್ನೆರಡರಿಂದ ಐದೂವರೆ ವರೆಗೆ, ಗೊತ್ತಾ ಯಿತೋ ? ''

ತಿಮ್ಮ : "ಭಲೆ, ಭೇಷ್, ಸ್ವಾಮೀ ! ಸಾಹೇಬರು ಅಂದರೆ ನಮ್ಮ ಸಾಹೇಬರ ಹಾಗಿರಬೇಕು. ಏನೋ ಜಾಸ್ತಿ ಕೆಲಸ ತೆಗೀತೇವೆ ಅಂತ ಗಡಿಯಾರ ಮುಂದಕ್ಕಿಟ್ಟರು. ಆದರೆ, ನೋಡಿ, ನಮ್ಮ ಸಾಹೇಬರ ಒಂದು ಗುಪ್ತಲಿ ಗೀಟಿನಿಂದ ಅರ್ಧ ಘಂಟೆ ಕೆಲಸಾನೇ ಕಡಿಮೆಯಾಗಿ ಹೋಯ್ತು. ! "

## ದೃಶ್ಯ ೩—ಸೂರ್ಯಲೋಕ

ಸೂರ್ಯ : (ಹೆಂಡತಿಗೆ) "ಏನು, ತಾರಾ, ಇನ್ನು ಕಾಫಿ ಆಗಿಲ್ಲ ಏಕೆ ? ಹೊತ್ತಾಗಿ ಹೋಯಿತಲ್ಲಾ. ಈಗ ಗಡಿಯಾರ ಒಂದು ಘಂಟೆ ಮುಂದೆ ಇಟ್ಟಿದ್ದಾರೆಂದು ಗೊತ್ತಿಲ್ಲವೆ ? ನಾನು ಬೇಗ ಹೊರಟುಬಿಡಬೇಕು.''

ತಾರೆ : "ಸ್ವಲ್ಪ ಇರಿ ಅಂದ್ರೆ. ಕೊಂಚ ಉಪ್ಪಿಟ್ಟು ಮಾಡಿದ್ದೇನೆ. ದಿನವೆಲ್ಲಾ ಹೋಗಿ ದುಡಿಯಬೇಕು. ಕಾಫಿ ಇನ್ನೇನು ಆಗಿಹೋಯ್ತು. ನೀವು ಸಂಧ್ಯಾವಂದನೆ ಮುಗಿಸಿ ಬಟ್ಟೆ ಹಾಕಿಕೊಳ್ಳಿ."

ಸೂರ್ಯ : "ಸರಿ, ಸರಿ. ಹೀಗಾದರೆ ಆಯ್ತು, ಬರುತ್ತೆ ನನ್ನ ಕೆಲಸಕ್ಕೆ ವಿಪತ್ತು. ನಾನೇನು ದೊಡ್ಡ ಆಫೀಸರು ಕೆಟ್ಟುಹೋದೆನೇ, ಮನಸ್ಸು ಬಂದ ಹೊತ್ತಿಗೆ ಕೆಲಸಕ್ಕೆ ಹೋಗುವುದಕ್ಕೆ ? ಮೆಲ್ಲಗೆ ಸ್ವಲ್ಪ ಜಪಮಾಡಿ ಹೊರಡುವುದು ಹೊತ್ತಾಯಿತು ಎಂದು ಹೇಳಿದ್ದಕ್ಕೆ ನಮ್ಮ ಹೊಸ ಸಾಹೇಬರು 'ಹುಷಾರ್, ಈ ಜಪ ಜುಟ್ಟು ಇವುಗಳ ತಂಟೆ ಇಲ್ಲದವರನ್ನು ನಿಮ್ಮ ಕೆಲಸಕ್ಕೆ ನೇಮಿಸಬೇಕಾದೀತು' ಎಂದುಬಿಟ್ಟರು. ಎಲ್ಲರಿಗೂ ಈಗ ಹನ್ನೆರಡರಿಂದ ಐದೂವರೆ ವರೆಗೆ ಕೆಲಸವಂತೆ. ನಾನೂ ಮಾತ್ರ ಬೆಳಗಿನಿಂದ ಸಂಜೆಯವರಿಗೂ ದುಡಿಯಲೇ ಬೇಕು."

ಸಂಧ್ಯಾವಂದನೆ ಮುಗಿಯಿತು. ಬಟ್ಟೆ ಹಾಕಿಕೊಂಡು 'ಎಲ್ಲಿ ಕಾಫಿ ?'

ತಾರೆ : "ಇದೋ ಬಂತು ಅಂದ್ರೆ, ನೋಡಿ ನಿಮ್ಮ ರಥ, ಗಿಥ, ಎಲ್ಲ ಸಿದ್ಧವಾಗಿದೆಯೇ ಎಂದು."

ಸೂರ್ಯ : "ಯಾರಲ್ಲಿ ? "

ದೂತ : "ದೇವ, ಏನಪ್ಪಣೆ ? "

ಸೂ : "ರಥವು ಸಿದ್ಧವಾಗಿರುವುದೇ ? ಕುದುರೆಗಳಿಗೆಲ್ಲಾ ಹುರುಳಿ ಮುಂತಾದುವು ಆಯಿತೇ ? "

ದೂತ : "ದೇವ, ಸಾಕಾದಷ್ಟು ಹುರುಳಿಯೇ ಸಿಕ್ಕಲಿಲ್ಲ. ಕುದುರೆ ತಲೆ ಒಂದಕ್ಕೆ ೧ ಪಾವು ಹುರುಳಿಗಿಂತ ಜಾಸ್ತಿ ಕೊಡುವುದಿಲ್ಲವಂತೆ. ಬೆಲೆಯೋ, ರೂಪಾಯಿಗೆ ಆರೇ ಸೇರು. ನಮ್ಮ ಕುದುರೆಗಳು ಬೆಳಗಿನಿಂದ ರಾತ್ರಿಯವರೆಗೂ ಓಡಬೇಕು. ಹೇಗೆ ಮಾಡುವುದೋ ತಿಳಿಯದಾಗಿದೆ."

ಸೂರ್ಯ : "ಹೀಗಾದರೆ ಚೆನ್ನಾಯಿತು. ಕುಬೇರಶೆಟ್ಟಿಯಲ್ಲಿ ಗುಟ್ಟಿನಲ್ಲಿ ನಮಗೆಂದು ಕೇಳಿದರೆ ಸಿಕ್ಕುವುದಿಲ್ಲವೆ ? "

ದೂತ : "ಅಲ್ಲಿಯೂ ವಿಚಾರಿಸಿದೆ. ನಮಗಾಗಿ ರೂಪಾಯಿಗೆ ನಾಲ್ಕು ಸೇರಿನಂತೆ ಎರಡು ಮೂಟೆ ಕೊಡುವನಂತೆ. ಆದರೆ ರಸೀತಿ ಕೇಳಕೂಡದು."

ಸೂರ್ಯ : "ರೂಪಾಯಿಗೆ ನಾಲ್ಕು ಸೇರಿನಂತೆ ಹುರುಳಿ ಕೊಳ್ಳುವುದಕ್ಕೆ ನಮಗೇನು ಮಂತ್ರಿ ಸಂಬಳ ಬರುತ್ತದೆಯೇ ? ಬಹಳ ಕಷ್ಟಬಂತು ಭಗವಂತನೇ ಕಾಪಾಡಬೇಕು. ಹೋಗಲಿ, ಕುದುರೆಗಳ ಲಾಳವೆಲ್ಲಾ ಸರಿಯಾಗಿದೆಯೋ ? "

ದೂತ : "ನಾಲ್ಕನೇ ಕುದುರೆಗೆ ಬಲಗಡೆ ಮುಂಗೊರಸಿನಲ್ಲಿ ಎರಡು ಮೊಳೆ ಕಿತ್ತುಹೋಗಿತ್ತು. ಹಾಕಿಸಿಕೊಂಡು ಬರೋಣವೆಂದು ವಿಶ್ವಕರ್ಮನ ಬಳಿ ಹೋಗಿದ್ದೆ. ಅವನು ಮೊಳೆಗಳ ಬೆಲೆ ೧ಕ್ಕೆ ನೂರರಷ್ಟು ಆಗಿದೆಯೆಂದು ಬಲವಂತ ಮಾಡಿದ ಮೇಲೆ ರೂಪಾಯಿಗೆ ನಾಲ್ಕು ಮೊಳೆ ಕೊಟ್ಟ. ಲಾಳ ಸರಿಮಾಡಿದ್ದೇನೆ."

ಸೂರ್ಯ : (ನಿಟ್ಟುಸಿರು ಬಿಡುತ್ತಾ) "ಬದುಕಿದ ಹಾಗಾಯಿತು.... ಹೋಗಲಿ, ರಥವನ್ನು ಹೊಡೆದುಕೊಂಡು ಬಾ."

ಒಳಗೆ ಬಂದು "ತಾರಾ, ಎಲ್ಲಿ, ಕಾಫಿ ಇನ್ನು ಬರಲೇ ಇಲ್ಲ. ಅಲ್ಲಿ ನೋಡು ಆ ಹಾಳು ಭೂಮಿ ತಿರುಗುತ್ತಲೇ ಇದೆ. ಆಗಲೇ ಇಂಡಿಯಾ ದೇಶ ಕಾಣಿಸುವುದರಲ್ಲಿದೆ. ಇನ್ನೂ ಹೊರಡಬೇಡವೇ, ನಾನು?"

ತಾರೆ : "ಇದೋ ತೆಗೆದುಕೊಳ್ಳಿ ಅಂದರೆ, ಒಳ್ಳೆಯ ಕೆಲಸ ನಿಮ್ಮದು. ಒಂದು ದಿವಸ ಸ್ವಲ್ಪ ಸಾವಕಾಶವಿರಬಾರದೆ ? "

ಸೂ : "ಉಂಟೆ ? ನಿನಗೆ ಗೊತ್ತಿಲ್ಲವೆ ?–ನಾನು ಈ ಶ್ವೇತ ಚಕ್ರಾಧಿಪತ್ಯದಲ್ಲಿ ಇಪ್ಪತ್ತುನಾಲ್ಕು ಘಂಟೆಯೂ ಇರಲೇಬೇಕೆಂದು ? ಈಗ ನೋಡು, ಆಗಲೇ ಎಷ್ಟು ಹೊತ್ತಾಯಿತು–ಅಸ್ಸಾಮ್ ದೇಶವು ಕಾಣಿಸಿಕೊಳ್ಳುತ್ತಿದೆ.

ತಾರೆ: ಹೋಗಲಿ, ಬಿಡಿ ಅಂದ್ರೆ. ಇದ್ದೇ ಇದೆ, ಹೊಟ್ಟೆಪಾಡಿಗಾಗಿ ಈ ಕೆಲಸದ ಗೋಳು. ಈಗ ಆದದ್ದು ತಾನೆ ಏನು ? ಅಸ್ಸಾಮಿನಿಂದಲೇ ಶುರುಮಾಡಿ, ನಿಮ್ಮ ಇಂದಿನ ಓಟವನ್ನು! ಪೂರ್ವ ಏಷ್ಯಾ ಮೇಲೆ ಈದಿನ ನಿಮ್ಮ ಬೆಳಕೆ ಇಲ್ಲತಾನೆ? ಅವರದೇ ತಪ್ಪು....ಏಕೆ ಗಡಿಯಾರವನ್ನು ಮುಂದಕ್ಕಿಟ್ಟರಂತೆ...."

"ಠಣ್ !" ಎಂದು ಗಡಿಯಾರದಲ್ಲಿ ಘಂಟೆ ಹೊಡೆಯಲು ದಿಗ್ಭ್ರಮೆಯಿಂದ ಎಚ್ಚೆತ್ತೆ.

* * *

ಕ್ಷೇಮ ಶ್ರೀ ಬೆಂಗಳೂರು,

"ಕೊರವಂಜಿ" ಸಂಪಾದಕರಲ್ಲಿ ವಿ॥ಗಳು. ಮಂಗಳವಾರ.

ನೀವು ಮೇಲೆ ಓದಿದುದು (ಓದಿದ್ದರೆ!) ಸ್ವಪ್ನಾವಸ್ಥೆಯಲ್ಲಿ ಕಂಡ ಒಂದು ಭ್ರಮಾತರಂಗ. ಕಂಡದ್ದು ಹಾಗೆಯೇ ಬರೆದು ಕಳುಹಿಸಿದ್ದೇನೆ. ಹಿಂದಿನ ಸಾಯಂಕಾಲ ತಿಂದಿದ್ದ ಮಸಾಲು ವಡೆಗೂ ಈ ಸ್ವಪ್ನಕ್ಕೂ ಏನೇನೂ ಸಂಬಂಧವಿಲ್ಲವೆಂದು ಖಂಡಿತವಾಗಿ ಹೇಳುತ್ತೇನೆ. ಅಲ್ಲದೆ, ಮೊನ್ನೆ ನಮ್ಮ ಪಕ್ಕದ ಮನೆಯ ರಾಯರಿಗೂ ರೈಲು ತಪ್ಪಿದ್ದಕ್ಕೂ ಕೂಡ ಸಂಬಂಧವಿಲ್ಲ.......

ಈದಿನ ಯಾರೋ ಹೇಳಿದರು–ಗಡಿಯಾರ ಮತ್ತೆ ಯಥಾಪ್ರಕಾರ ಹಿಂದಕ್ಕಿಡಲ್ಪಡುವುದೆಂದು. ಹೀಗಾಗುವುದಕ್ಕೆ ಮುಂಚೆಯೇ, ಪಾಪ, ಆ ಸೂರ್ಯನ ತಾಪತ್ರಯಗಳು ಸ್ವಲ್ಪ ಎಲ್ಲರಿಗೂ ಗೊತ್ತಾಗಲೆಂದು ಅವಸರದಲ್ಲಿ ಬರೆದು ಕಳುಹಿಸಿದ್ದೇನೆ. ನೀವು ಮನಸ್ಸು ಮಾಡಿದರೆ "ಕೊರವಂಜಿ" ವಾಚಕರಿಗಾದರೂ ತಿಳಿಯುತ್ತೆ.

ಇತಿ ತಮ್ಮ ವಿಶ್ವಾಸಿ,

**ಬೀರಣ್ಣ.**

* * * *

ಖರ್ಮಪ್ಪನೆಂಬೊಬ್ಬ ವೈಶ್ಯನಿದ್ದನು,
ನಿರ್ಮಲಾತ್ಮನಾಗಿ ಕಾಸು ಕೊಡುತಿದ್ದನು :
ಆರು ಸೇರಿನಂತೆ ಕೊಂಡು
ಮೂರು ಸೇರಿನಂತೆ ಮಾರಿ
"ಕರ್ಮ ಪ್ರಕಾಶ"ನೆಂದು ಶ್ರೇಷ್ಠ ಬಿರುದು ತಾಳ್ದನು !

* * * *

ಮುಸ್ತಾಫನೆಂಬೊಬ್ಬ "ಉಸ್ತಾದಿ" ಇದ್ದನು,
ಕುಸ್ತಿಯಲ್ಲಿ ಗೆದ್ದು ಗೆದ್ದು ಹಿಗ್ಗುತ್ತಿದ್ದನು :
ಕಸ್ಸೆ ಕಂಡು ಹಾರಿಬಿದ್ದು
ಸಿಸ್ಸೆ ಮೇಲೆ ಜಾರಿಬಿದ್ದ
ಉಸ್ತಾದರೆಲ್ಲ ನಕ್ಕುನಕ್ಕು ಸುಸ್ತಾದರು !

# ಹೆಸರಿಟ್ಟುಕೊಳ್ಳುವುದು

(ಲೆ: ಬೀಜಿ, ಸ್ಟೂನೊ)

ಹೆಸರಿಟ್ಟುಕೊಳ್ಳುವುದು ಬೇರೆ, ಹೆಸರನ್ನು ಪಡೆಯುವುದು ಬೇರೆ. ಹೆಸರಿಟ್ಟುಕೊಳ್ಳುವುದೆಂದರೆ ತಮ್ಮ ನಿಜವಾದ ಹೆಸರಿನ ಬದಲು ಬೇರೆ ಹೆಸರನ್ನು ತಮಗೆ ತಾವೇ ಇಟ್ಟುಕೊಳ್ಳುವುದು. ಹೆಸರನ್ನು ಪಡೆಯುವುದರಲ್ಲಿ ಮಾತ್ರ ಇಂಥ ಹೆಸರನ್ನು ಜನರೇ ಇಡುವರು; ಜನರೇ ಹೊಸ ಹೆಸರನ್ನು ಕೊಡುವರು. ನಾರಾಯಣ ಎಂಬ ಹೆಸರಿನವನು, ಲೇಖ ಬರೆಯುವ ಚಟವು ಹತ್ತಿ ತ್ರಿಶಂಕು,ಮೇಘದೂತ ಮೊದಲಾದ ಹೆಸರುಗಳನ್ನು ತಳೆಯುವನು ಅಥವಾ ಕವಿತೆಗಳಿಗೆ ಕೈ ಹಾಕಿದವನಾದರೆ, ಅಭಿನವ ಕಾಲಿದಾಸ, ರನ್ನಪ್ಪ (ಅಂದರೆ ಕವಿತೆ ಬರೆಯುವುದರಲ್ಲಿ ರನ್ನನ ಅಪ್ಪ) ಎಂಬೀ ಹೆಸರುಗಳನ್ನು ಇಟ್ಟುಕೊಳ್ಳಬಹುದು. ಅದೇ ನಾರಾಯಣನು, ತೆಂಗಿನ ಗಿಡದಂತೆ ಉದ್ದವಾಗಿ ಬೆಳೆದಿದ್ದರೆ, ಜನರು ಅವನಿಗೆ ಜಯದ್ರಥ ಎಂಬ ಹೆಸರನ್ನೂ ತಿನಸಬಕ್ಕನಾಗಿದ್ದರೆ, ಬಕಾಸುರನೆಂಬ ಹೆಸರನ್ನೂ ಕೊಡಬಹುದು. ರನ್ನಪ್ಪ, ತ್ರಿಶಂಕು ಮೊದಲಾದುವುಗಳು ಇಟ್ಟುಕೊಂಡ ಹೆಸರುಗಳಾದರೆ, ಜಯದ್ರಥ, ಬಕಾಸುರ ಮೊದಲಾದವುಗಳು ಪಡೆದ ಹೆಸರುಗಳು.

ಹೆಸರನ್ನಿಟ್ಟುಕೊಳ್ಳುವುದು, ವಿಶೇಷವಾಗಿ ಲೇಖ ಬರೆಯುವ ಪ್ರಸಂಗದಲ್ಲಿ. ಬೇರೆ ಕಾರ್ಯರಂಗಗಳಲ್ಲಿ, ತಮ್ಮ ಇದ್ದ ಹೆಸರನ್ನು ಬಿಟ್ಟು ಬೇರೆ ಹೆಸರಿನಿಂದ ಕಾರ್ಯವನ್ನು ನಡೆಸಿದ ಜನರನ್ನು ನಾನು ನೋಡಿಲ್ಲ, ಅವರ ವಿಷಯವಾಗಿ ಕೇಳಿಲ್ಲ ಕೂಡ. ವಿಮಾ ಕಂಪೆನಿಯ ವಾರ್ಷಿಕ ವರದಿಯನ್ನು ತೆಗೆದು ನೋಡಿರಿ, ರೈಲ್ವೇ ಸಲ್ಲಾಗಾರ ಮಂಡಲದಲ್ಲಿಯ ಸದಸ್ಯರ ಹೆಸರುಗಳನ್ನು ಓದಿರಿ, ಮುನಿಸಿಪಾಲಿಟಿಯ ಚುನಾವಣೆಗೆ ನಿಂತ ಜನರ ಲಿಸ್ಟು ಕಣ್ಣುಮುಂದೆ ಹಾಯಿಸಿರಿ. ನಿಮಗೆ ಉದ್ದುದ್ದವಾದ ಹೆಸರುಗಳು ಕಾಣುವುವು. ಇಮಾಮ ಸಾಹೇಬ ಅಬ್ದುಲ್ ಕರೀಮ ಬಾಟ್ಲಿವಾಲಾ, ಫ್ರೆಡ್ ರುಸ್ತುಮ್‌ಜಿ ನಸರವಾನಜಿ, ಬಲಭೀಮ ರಾಮರಾವ ಹುಯಿಲಗೋಳ, ತ್ರಿಭುವನದಾಸ ವಲ್ಲಭದಾಸ ಸಾರಾಭಾಯಿ, ನಾರಾಯಣ ಗಣೇಶ ಗಡಕರಿ, ಟಿ. ವ್ಹಿ. ಎಸ್. ಚಿಂತಾಮಣಿ ರಾಮ್ಮ ಮೊದಲಾದ ಹೆಸರು ಕಂಡಾವು. ಆದರೆ ವರ್ತಮಾನಪತ್ರ ಅಥವಾ ಮಾಸಿಕಗಳಲ್ಲಿ ಹಣಿಕಿ ಹಾಕಿರಿ. ಧನಂಜಯ, ನಕಲಿ ನಾರಾಯಣಾಚಾರ್ಯ, ಸಂಜಯ, ಸದಾನಂದ ಮೊದಲಾದ ಹೆಸರುಗಳನ್ನು ತಪ್ಪದೆ ನೋಡುವಿರಿ.

ಇನ್ನು ಲೇಖ ಬರೆಯುವಾಗ ಕೂಡ ಜನರು ತಮ್ಮ ಹೆಸರನ್ನು ಯಾಕೆ ಬದಲಿಸುವರೆಂದು ನೀವು ಕೇಳಬಹುದು. ಬರೆಯುವ ಧೈರ್ಯವಿದ್ದರೆ, ತಮ್ಮ ನಿಜವಾದ ಹೆಸರಿನಿಂದಲೇ ಬರೆಯಬೇಕು ಎಂದು ಆಹ್ವಾನಿಸಬಹುದು ಕೂಡ. ಆದರೆ ಹೆಸರನ್ನಿಟ್ಟುಕೊಂಡು ಬರೆಯುವುದರಲ್ಲಿ ಎಷ್ಟೋ ಪ್ರಯೋಜನಗಳಿವೆ.

ಎಷ್ಟೋ ಜನರಿಗೆ ತಮ್ಮ ಹೆಸರು ರುಚಿ

ಸುವುದಿಲ್ಲ. ಬಲಭೀಮ ಎಂಬ ತನ್ನ ಹೆಸರನ್ನು ಹೇಳಲು ನಮ್ಮ ಖಾನಾವಳಿಯಲ್ಲಿಯ ಬಡಿಸುವವನು ನಾಚಿದನು. ಏಲ್ಲು, ದುರ್ಗಾ ಮೊದಲಾದ ಹೆಸರುಗಳು ನಮ್ಮ ಮಹಿಳೆಯರಿಗೆ ರುಚಿಸುವುದಿಲ್ಲ. ಮತ್ತು ಎಷ್ಟೊಂದು ಕಡೆಗೆ ತಮ್ಮ ಹೆಸರಿನಲ್ಲಿ 'ಚಾರ್ಮ್' (ಮಾಧುರ್ಯ) ಇಲ್ಲವೆಂದು, ಭ್ರಮೆಯಿಂದ ಕೆಲವರು ತಿಳಿದುಕೊಳ್ಳುವರು. ಸಿಂಧೂನ ಉದಾಹರಣೆಯನ್ನೇ ತೆಗೆದುಕೊಳ್ಳಿರಿ ಬೇಕಾದರೆ. ನಾನು ಮತ್ತು ಸಿಂಧು ಮಾತಾಡುತ್ತ ಕುಳಿತಿದ್ದೆವು. ಹೆಸರಿನ ಮೇಲೆ ಏನೋ ಹೊರಟಿತು. "ಬೀಜಿ" ಎಂದಳು ಸಿಂಧು.

"ಏನು?" ಎಂದು ಕೇಳಿದೆ.

"ಬೀಜಿ, ಈ ಹೆಸರು ಇಡುವುದರಲ್ಲಿ ನಿನ್ನ ತಾಯಿಯವರು ಬಹಳ ಚಾತುರ್ಯ ತೋರಿಸಿದ್ದಾರೆ, ನೋಡೋ."

"ಆದರೆ, ಚಾತುರ್ಯ ತೋರಿಸಲಿಕ್ಕೆ ಇಡದಿದ್ದರೂ ಸಿಂಧು ಈ ಹೆಸರಿನಲ್ಲಿ ನಿಸರ್ಗಸಿದ್ಧವಾದ ಮಾಧುರ್ಯವಿದೆ."

"ಕಲ್ಲ ಹಚ್ಚಿತು ಮಾಧುರ್ಯ."

ಆದೇ 'ಸಿಂಧು' ಈ ಹೆಸರಿನಲ್ಲಿ ಅಮೃತವಿದೆಯೆಂದೂ ಸೀಸವನ್ನು ಬಂಗಾರಕ್ಕೆ ಪರಿವರ್ತಿಸುವ ಗುಣವಿದೆಯೆಂದೂ ಅದರಲ್ಲಿ ಮೂರು ಲೋಕದ ಸಾರವಿರುವದೆಂದೂ, ಅವಳ ಪ್ರಿಯಕರನು ನನಗೆ ಆಗಾಗ್ಗೆ ಹೇಳುವನು. ಯಾವದೇ ಕಾರಣದಿಂದಿರಲಿ, ತಮ್ಮ ಹೆಸರು ತಮ್ಮ ಮನಸ್ಸಿಗೆ ಬರದಿದ್ದವರು, ಲೇಖನ ಬರೆಯುವುದಾದರೆ, ತಮ್ಮ ಹೆಸರನ್ನು ಬದಲಿಸದೆ ಇರುವುದಿಲ್ಲ. ಹೀಗೆ, ಹೆಸರನ್ನು ಬದಲಿಸುವುದರಲ್ಲಿ ತಥ್ಯವಿಷ್ಟೇ. "ನಾನು ಹೋದ ಮೇಲೆ, ನನ್ನ ಹೆಸರು ಉಳಿಯುವುದಾದರೆ ನನ್ನ ನಿಜವಾದ 'ಅಸಡ್ಡಾಳ' ಹೆಸರು ಉಳಿಯುವದಕ್ಕಿಂತ ನನ್ನ ಈ ಹೊಸ ಹೆಸರು ಉಳಿಯಲಿ" ಎಂದು. ದುರ್ದೈವದಿಂದ ಒಮ್ಮೊಮ್ಮೆ ಇಟ್ಟುಕೊಂಡ ಹೆಸರೇ ನಿಜವಾದ ಹೆಸರಿಗಿಂತ ಹೆಚ್ಚು 'ಅಸಡ್ಡಾಳ'ವಿರುವದು. ಆ ಮಾತು ಬೇರೆ.

ಇನ್ನು ಕೆಲವರು ಹೊಸ ಹೆಸರನ್ನು ತಳೆಯಲೇ ಬೇಕಾಗುವುದು. ಯಾಕೆಂದರೆ, ಅವರು ತಮ್ಮ ಹೆಸರಿನಿಂದ ಲೇಖ ಬರೆಯಲಾರರು. ಸರಕಾರಿ ನೌಕರಿಯಲ್ಲಿದ್ದವರು, ಯುದ್ಧದ ವಿಷಯವಾಗಿ ಲೇಖ ಬರೆಯಲು ಅಥವಾ ಅಟ್ಲಾಂಟಿಕ್ ಚಾರ್ಟರ್ ಚರ್ಚಿಸಲು ಬೇರೆ ಹೆಸರಿನ ಹಿಂದೆ ಅಡಗಬೇಕಾಗುವುದು. ಯಾವುದಾದರೊಂದು ದೊಡ್ಡ ಮಠದ ಸ್ವಾಮಿಗಳು ಅನೇಕ ಪ್ರಯೋಗಗಳನ್ನು ಮಾಡಿ, ಕಾಮಶಾಸ್ತ್ರದಲ್ಲಿ ಒಂದು ಅದ್ಭುತಶೋಧವನ್ನು ಮಾಡಿದರೆ, ಅದನ್ನು ಬೇರೆ ಹೆಸರನ್ನಿಟ್ಟುಕೊಂಡೇ ಛಾಪಿಸುವರು. ಗಂಡನಿಗಿಂತ ಹೆಚ್ಚು ಸುಂದರ ಲೇಖಗಳನ್ನು ಬರೆಯುವ ಪತಿವ್ರತೆಯು ಗಂಡನ ಹೆಸರಿಗೆ ಕುಂದು ಬಂದೀತೆಂಬ ಭಯದಿಂದ ಬೇರೆ ಹೆಸರು ಹುಡುಕುವಳು. ಇಪ್ಪತ್ತು ಸಾರಿ ಮ್ಯಾಟ್ರಿಕ್ ನಾಪಾಸಾದವನು ತನ್ನ ಹೆಸರನ್ನು ಓದಿ ಜನರು ತನ್ನ ಲೇಖವನ್ನು ಓದಲಿಕ್ಕಿಲ್ಲವೆಂದು ಬೇರೆ ಹೆಸರಿನಿಂದಲೇ ಕೀರ್ತಿದೇವತೆಯ ಆರಾಧನೆ ಮಾಡಬೇಕು. ಸಣ್ಣ ಕತೆಯನ್ನು ತಾನೇ ಬರೆಯುವದು, ವಿಚಾರ ಮಾಡುವ ಮಾತಿನ ಕಾಲಂನ್ನು ತಾನೇ ತುಂಬುವದು, ನಾಲ್ಕು ನಿಟ್ಟಿನ ನೋಟವನ್ನು ತಾನೇ ನೋಡಿಕೊಳ್ಳುವುದು. ತಿಂಗಳಿಗೊಂದು ಕವಿತೆಯನ್ನಾದರೂ ತಾನೇ ಬರೆಯ

ಬೇಕಾದ ಸಂಪಾದಕ ಮಹಾಶಯನು ಈ ಎಲ್ಲ ವ್ಯವಹಾರಗಳನ್ನು ಬೇರೆ ಬೇರೆ ಹೆಸರಿನಿಂದ ನಡೆಸಬೇಕಾಗುತ್ತದೆ. ಅದರಂತೆ ವಿಷಯಕ್ಕನುಸಾರವಾಗಿ, ಹೆಂಗಸು ಗಂಡಸಿನ ಹೆಸರನ್ನು, ಗಂಡಸು ಹೆಂಗಸಿನ ಹೆಸರನ್ನು ಹೊಂದಬೇಕಾಗುತ್ತದೆ. ಓರ್ವ ಯುವತಿಗೆ ಮಿಲಿಟರಿ ಲೇಖ ಬರೆಯುವದರಲ್ಲಿ ಕೈ ಕೂತರೂ, ಅವಳು ಪುರುಷನ ಹೆಸರಿನಿಂದಲೇ ಅವುಗಳನ್ನು ಬರೆಯಬೇಕಾಗುವುದು. ಓರ್ವ ಸಿಂಪಿಗನು, ತನ್ನ ಹೊಲಿಗೆಯ ವಿಷಯಕ ಲೇಖಗಳನ್ನು ಸ್ತ್ರೀಯ ಹೆಸರಿನಿಂದ ಛಾಪಿಸಿದರೆ, ಹೆಚ್ಚು ಪ್ರಗತಿಯನ್ನು ಹೊಂದುವನು.

ಕೆಲವರು ತಮ್ಮ ಹೆಸರಿನಿಂದ ಬರೆಯಲು ಶಕ್ಯವಿದ್ದರೂ ಬೇರೆ ಹೆಸರನ್ನಿಟ್ಟು ಕೊಂಡು ಬರೆಯುವರು. ಅವರಿಗೆ ತಮ್ಮ ಹೆಸರಿನಲ್ಲಿ ಮಾಧುರ್ಯ ತೋರಲಿಲ್ಲವೆಂತಲ್ಲ. ಆದರೆ ಅವರಿಗೆ ಬೇರೆ ಪ್ರಯೋಜನಗಳು ಕಂಡವಷ್ಟೆ. ಗಂಡಸರ ಲೇಖಗಳಿಗಿಂತ ಹೆಂಗಸರ ಲೇಖಗಳು ಹೆಚ್ಚು ಪ್ರೀತಿಗೆ ಪಾತ್ರವಾಗುವುವು. ಗಂಡಸಿಗೆ ಹೆಂಗಸೆಂದರೆ, ಮೊದಲೇ ಪ್ರೀತಿ; ಅವಳ ಲೇಖಗಳೆಂದರೆ, ಹೆಚ್ಚು ಪ್ರೀತಿ. ಅದನ್ನೇನೂ ವಿಸ್ತರಿಸಿ ಹೇಳಬೇಕಾಗಿಲ್ಲ. ಆದರೆ ಹೆಂಗಸಿಗೆ, ಗಂಡಸಿನ ಲೇಖಗಳು ಸೇರಬೇಕು, ನಿಸರ್ಗನಿಯಮಕ್ಕನುಸಾರವಾಗಿ. ಆದರೆ ಹಾಗೆ ಆಗುವುದಿಲ್ಲ. ಹೆಂಗಸರಿಗೂ ಕೂಡ ಹೆಂಗಸರ ಹೆಸರೇ ಪ್ರಿಯವಾಗುವುದು. ಓರ್ವ ಮಹಿಳೆಯ ಲೇಖವನ್ನು ನೋಡಿ ಓರ್ವಳು ಮತ್ತೊಬ್ಬಳನ್ನು ಮೊಳಕೈಯಿಂದ ತಿವಿದು ಹೇಳಬಹುದು "ನೋಡs ಗಂಡಸರು ಇಷ್ಟ ಜಿಗದಾಡತಾರ. ಅವರಿಗೆ ಹೇಳಬೇಕು ನಾವು ನಿಮ್ಮಂಗ ಬರೀತೆವಂತ." ಗಂಡಸರು ಹೆಂಗಸರ ಹೆಸರನ್ನು ತಳೆಯಲು ಪ್ರಯತ್ನಿಸುತ್ತಾರೆ; ಹೆಂಗಸರು ಗಂಡಸರ ಹೆಸರಿಗೆ ಮನಸ್ಸು ಮಾಡದೆ, ತಮ್ಮ ಹೆಸರನ್ನೇ ಇಟ್ಟುಕೊಂಡು ಸೌಭಾಗ್ಯವತಿಯ ಬದಲು ಕುಮಾರಿ ಎಂಬುದನ್ನು ಹಚ್ಚಿಕೊಳ್ಳುವ ಮೋಹಕ್ಕೆ ಮಾತ್ರ ಬೀಳುವರು. ಇದೆಲ್ಲಕ್ಕೆ ಮೂರ್ಖರೆನ್ನಕೂಡದು. ಯಾಕೆಂದರೆ ಇಂಗ್ಲಂಡ್, ಅಮೇರಿಕಾಗಳಲ್ಲಿ ಕೂಡ ಇದೇ ಹಾಡು.

ಅಥವಾ ನಿಮಗೆ ಯಾರಿಗಾದರೂ ಮೂರ್ಖ ಎನ್ನಲೇ ಬೇಕಾಗಿದ್ದರೆ, ಅನುಮಾನಿಸಿ ಅನುಮಾನಿಸಿ, ಹೆಸರಿಟ್ಟುಕೊಳ್ಳುವವರಿಗೆ, ಶತಮೂರ್ಖರೆನ್ನಿರಿ, ಬೇಕಾದರೆ. ಯಾವನೋ ಒಬ್ಬನು ಯಾವುದೋ ಹೆಸರಿಟ್ಟುಕೊಂಡು ಒಂದು ಲೇಖವನ್ನು ಒಂದು ಮಾಸಿಕಕ್ಕೆ ಕಳಿಸಿದನು. ಮುಂದೆ ಹದಿನೈದು ದಿವಸಗಳಲ್ಲಿ ಅವನಿಗೆ ಹೊಸ ವಿಚಾರ ಬಂದಿತು. ಲೇಖವನ್ನು ತನ್ನ ನಿಜವಾದ ಹೆಸರಿನಿಂದಲೇ ಪ್ರಕಟಿಸಿದರೆ, ತನಗೆ ಹೆಚ್ಚು ಹಿತಕರವೆಂದು ಅವನಿಗೆ ಹೊಳೆಯಿತು. ಕೂಡಲೇ ಸಂಪಾದಕರಿಗೆ ಒಂದು ಪತ್ರವನ್ನು ಕಳಿಸಿದ ಆ ರೀತಿ. ಆದರೆ, ಆ ಪತ್ರವು ಸಂಪಾದಕರ ಕೈಸೇರುವುದರೊಳಗಾಗಿಯೇ ಅವನ ಲೇಖವು, ಅವನು ಇಟ್ಟುಕೊಂಡ ಹೆಸರಿನಿಂದ ಮುದ್ರಿತವಾಗಿತ್ತು. ಆದರೆ, ಉದಾರ ಹೃದಯದ ಸಂಪಾದಕರು, ಆ ರೀತಿ ಲೇಖಕನಿಗೆ ತಿಳಿಸಿದರೆ ಅವನ ಹೃದಯವು ದುಃಖಕ್ಕೀಡಾಗುವುದೆಂದು, "ಅರ್ಧಂ ತ್ಯಜತಿ ಪಂಡಿತಃ" ಎಂಬ ನ್ಯಾಯದಿಂದ ಇನ್ನೂ ತಯಾರಾಗತಕ್ಕ ಅನುಕ್ರಮಣಿಕೆಯಲ್ಲಿ ಅವನ ನಿಜವಾದ ಹೆಸರನ್ನು ಲೇಖದ

ಇದುರಿನಲ್ಲಿ ಪ್ರಕಟಿಸುವ ವ್ಯವಸ್ಥೆ ಮಾಡಿಸಿದರು. ವಾಚಕರಿಗೆ ಈ ವಿಸಂಗತಿಯು ಕಂಡುಬರದೆ ಇರಲಿಲ್ಲ.

ಇಟ್ಟುಕೊಂಡ ಹೆಸರು, ಯಾವಾಗಲೂ ಗುರ್ತಿಸಲ್ಪಡುವುದು. ಅದು ವಿಲಕ್ಷಣವೇ ಆಗಿರುವುದು. ನನ್ನಂತೆ ವಿಲಕ್ಷಣವಾದ ಹೆಸರಿದ್ದವರ ಮಾತು ಮಾತ್ರ ಬೇರೆ. ನನ್ನ ನಿಜವಾದ ಹೆಸರನ್ನು ಬರೆದರೂ ಕೂಡ, ಇದೆಂಥ ಹೆಸರನ್ನಿಟ್ಟುಕೊಂಡಿರುವಿರಿ, ಎಂದು ಜನರು ಕೇಳುವರು. ನಾನೇನು ಹೇಳುವೆನು ? ಬೀಜಿ ಸ್ಟೂನೊ! ಬೀಜಿ ಎಂಬ ನನ್ನ ಹೆಸರು, ಸಿಂಧು ಹೇಳಿದುದು ನಿಜವಾದರೆ, ನನ್ನ ತಾಯಿಯು ಹೆಸರಿಡುವ ಚಾತುರ್ಯದಿಂದ ನನಗೆ ಲಭಿಸಿತು. ಇನ್ನು ನಮಗೆ ಸ್ಟೂನೊ ಎಂಬ ಅಡ್ಡ ಹೆಸರು, ಹೇಗೆ ಬಂದಿತೆಂಬ ವಿಷಯವು, ನಮ್ಮ ಅಜ್ಜನ ಅಜ್ಜನ ಅಪ್ಪನಿಗೆ ಗೊತ್ತಿತ್ತಂತೆ. ಅವನನ್ನೇ ಕೇಳಿದರೆ ತಿಳಿಯುವುದು. ನಮ್ಮ ಧಾರ್ಮಿಕ ತಿಳುವಳಿಕೆಯಿಂದ, ನಮ್ಮ ಅಜ್ಜನ ಅಜ್ಜನ ಅಪ್ಪನು ನಮ್ಮ ಅಜ್ಜನಾಗಿ ಹುಟ್ಟಿದನು. ಇನ್ನು ಅವನೇ ನನ್ನ ಮಗನಾಗಿ ಹುಟ್ಟತಕ್ಕವನಿದ್ದಾನೆ. ವಾಚಕರಿಗೆ ಬಹಳ ದಿವಸ ಹಾದಿ ಕಾಯುವ ಅವಶ್ಯಕತೆ ಇಲ್ಲ. ನಾನು ಬರುವ ವೈಶಾಖದಲ್ಲಿ ಲಗ್ನಮಾಡಿಕೊಳ್ಳುವವನಿದ್ದೇನೆ.

ಹೆಸರಿಟ್ಟುಕೊಂಡು ಬರೆಯುವುದರಲ್ಲಿ ಹಾನಿಯು ಕೂಡ ತಟ್ಟುವುದು. ಅದೇನೆಂದರೆ, ಇಟ್ಟುಕೊಂಡ ಹೆಸರು, ಪತ್ರಸೃಷ್ಟಿಯನ್ನು ಬಿಟ್ಟು, ಬ್ರಹ್ಮಸೃಷ್ಟಿಯಲ್ಲಿ ಕೂಡ ಕಾಲಿಡುವದು. ಪುರಾಣ ಬಿಟ್ಟಾಗ, ಧಾರವಾಡದಲ್ಲಿ ಕೆಳಗಿನ ಸಂವಾದವನ್ನು ನನ್ನಂತೆ ಎಷ್ಟೋ ಜನರು ಕೇಳಿರಬಹುದು.

"ಶಾರದಕ್ಕ ಯಾರವ್ವ ಭಾಳ ಛೊಲೊ, ಅಂತ ಕೇಳ್ಯೆನು?"

"ಶ್ರೀರಂಗರ ಹೇಣತಿ, ಗೊತ್ತಿಲ್ಲ ಏನು?"

"ಶ್ರೀರಂಗರ ಹೇಣತ್ಯೇs; ಪೊರಪೆಸರ ಜಾಗಿರದಾರರ ಹೇಣತಿ ಅಂತ ತಿಳಕೊಂಡಿದ್ದ ಬಿಡು."

"ಛೆ, ಛೆ."



# ನಮ್ಮೋರ ಹುಟ್ಟಿದ ಹಬ್ಬ

ನನಗವತ್ತು - ಅಂದರೆ - ಮೇಲೆ ಹೇಳಿದ ದಿನ. ಅವಳಿಗೆ ಏನಾದರೂ ಒಂದು Surprise Present ತಂದುಕೊಡಬೇಕೆನ್ನಿಸಿತು. ಆದಿನ ಬೆಳಿಗ್ಗೆ ಅವಳ ಸಂಭ್ರಮ ನೋಡಿದರೆ, ಒಂದು ತಿಂಗಳ ರೇಷನ್ ಸಾಮಾನೆಲ್ಲಾ ಅವತ್ತೇ ಮುಗಿಸುವ ಹಾಗೆ ಕಂಡುಬಂತು. ನನಗೆ ಸ್ವಲ್ಪ ಎದೆಬಡಿದುಕೊಂಡರೂ, ಅವಳ ಸಂತೋಷಕ್ಕೆ ಕಲ್ಲುಹಾಕಲು ನನಗೆ ಮನಸ್ಸು ಬರಲಿಲ್ಲ. ಆದರೆ ಏನು ತಂದುಕೊಡುವುದು? ನನಗೀ ಪ್ರಪಂಚದಲ್ಲಿದ್ದ ಆಸ್ತಿ ಎಲ್ಲಾ ಅವಳೇ. ಅವಳ ಮೈಮೇಲಿನ ಆಭರಣವೆಲ್ಲಾ ಅವಳ ತಂದೆ ಕೊಟ್ಟಿದ್ದು. ನಾನು ಒಂದು ಹೂವಿನ ಮಾಲೆ ಹೊರತು ಮತ್ಯಾವ ಸಂಪತ್ತನ್ನೂ ಅವಳಿಗೆ ಕೊಟ್ಟಿಲ್ಲ. ಈಗೇನು ಮಾಡುವುದು? ಬಹಳ ಹೊತ್ತು ಯೋಚನೆ ಮಾಡಿ ಕೊನೆಗೆ. ನನ್ನ ಸ್ನೇಹಿತ ರಾಜನ ಹತ್ತಿರ ಸ್ವಲ್ಪ ದುಡ್ಡು ಸಾಲ ಮಾಡಿ ಒಂದು Imitation Gold ಸರ ತೆಗೆದುಕೊಂಡು ಬರೋಣವೆಂದು ನಿರ್ಧರಿಸಿದೆ. ಆದರೆ ಯೋಚನೆ ಮಾಡಿದಮೇಲೆ ಅದಕ್ಕೂ ಒಪ್ಪಲಿಲ್ಲ. ನನ್ನನ್ನು ನಾನೇ ಬಯ್ದುಕೊಂಡು ದೇವರು ಮಾಡಿದ ಹಾಗಾಗಲಿ ಎಂದುಕೊಂಡು ಮನೆಯಿಂದ ಹೊರಟೆ. ಹೊರಡುವಾಗಲೆ ಅವಳು ಬಾಗಿಲಿಗೆ ಬಂದು "ಸರಿ, ಇವತ್ತಾದರೂ ಊಟಕ್ಕೆ ಹೊತ್ತಿಗೆ ಸರಿಯಾಗಿ ಬನ್ನಿ, ಹೋಟಲು ತಿಂಡಿ ತಿಂದುಬಿಟ್ಟು ಊಟಮಾಡುವಾಗ ನನ್ನ ಗೋಳಾಡಿಸಬೇಡಿ" ಎಂದಳು. ನಾನು ಹಿಂದಿರುಗಿ ನೋಡುವಷ್ಟರಲ್ಲಿ ನಕ್ಕು ಒಳಗೆ ಹೊರಟುಹೋದಳು. ಆಗಲಿ, ಇವತ್ತಾದರೂ ಅವಳ ಕೈಲಿ ಮೆಚ್ಚಿಸಿಕೊಳ್ಳೋಣವೆಂದು ರಾಜನ ಮನೆಕಡೆ ಹೊರಟೆ.

ರಾಜ ಮನೇಲೇ ಇದ್ದ. ನನಗವನನ್ನ ಮಾತಾಡಿಸೋಕೇ ಸ್ವಲ್ಪ ನಾಚಿಗೆಯಾಯಿತು. ಕೊನೆಗೆ ಅವನೇ "ಏನಯ್ಯಾ, ಹೊತ್ತಿಲ್ಲದ ಹೊತ್ತಿನಲ್ಲಿ ಬಂದೆ" ಅಂದ.

ನನಗೇನೂ ಹೇಳುವುದಕ್ಕೆ ತೋಚದೆ "ಏನಿಲ್ಲ ರಾಜ. ಇವತ್ತು ನಮ್ಮ ಮನೆಗೆ ಊಟಕ್ಕೆ ಬರಬೇಕಯ್ಯ" ಅಂದೆ. ಅದಕ್ಕವನು "ಇದೇನಯ್ಯಾ ಇವತ್ತು. ನನ್ನ ಹುಲ್ಲಾ ಜೊತೇಲೇ ಕತ್ತಿಗಳು ಆಲೆದಾಂಗೆ ಆಲೆದವು. ಏನೂ ಹೇಳಲಿಲ್ಲ. ಇವತ್ತು ಇಷ್ಟು ಅವಸರದಲ್ಲಿ ಊಟಕ್ಕೆ ಬರಹೇಳ್ತಿ. ಹೋಗಲಿ ಬಿಡು. ಈ ರೇಷನ್ ಕಾಲದಲ್ಲಿ ಯಾರಾದರೂ ಬಿಟ್ಟಿ ಕವಳಕ್ಕೆ ಬರಹೇಳಿದರೆ ಬರೋಲ್ಲಾ ಅನ್ನೋಕಾಗುತ್ಯೆ. ಆದರೂ ವಿಷಯವೇನು ಅಂತ ಓರೆಗಣ್ಣಿನಿಂದ ನೋಡಿದ.

ನನಗೆ ಪ್ರಾಣಸಂಕಟ ಶುರುವಾಯ್ತು. ಅವನನ್ನು ಊಟಕ್ಕೆ ಬರಹೇಳಿ ಅದೇ ಕಾಲಿಗೇಲಿ ಸಾಲಾ ಹೇಗೆ ಕೇಳೋದೂ ಅಂತ. ಸ್ವಲ್ಪ ಸುಮ್ಮನಿದ್ದೆ. ರಾಜ ಒಳಗೆ ನಗುತ್ತಿದ್ದ.

"ಏನೂ ಇಲ್ಲ ರಾಜ. ನೋಡು. ಇವತ್ತು.... ಅವರ.... ಹುಟ್ಟಿದ ಹಬ್ಬ. ಏನೋ, ಅನ್ನ ಸಾರು ಜೊತೆಗೆ ಒಂದು ಚಟ್ನೀನಾದರೂ ಇರುತ್ತೆ. ಹಾಗೆ ನಿನ್ನ ಜೊತೇಲಿ ತಿನ್ನೋಣ ಅಂತ.... ಅದೂ ಅಲ್ಲದೆ...."

"ಅವೂ ಅಲ್ಲವೇ....?"

"ಏನಿಲ್ಲ ರಾಜ. ಅವಳಿಗೇನಾದರೂ ಒಂದು Present ತಂದುಕೊಡಬೇಕು ಅಂತ ಇದ್ದೆ" ಅಂದೆ ಕೊನೆಗೆ.

ರಾಜ ಘೊಳ್ಳೆಂದು ನಕ್ಕು "ಅಹಾ! ನೀನು ಥೇಟ ಶ್ರೀರಾಮನ ಅವತಾರ ಕಣೋ. ಮದುವೆಯಾದ ಹೊಸದರಲ್ಲಿ ಎಲ್ಲರೂ ಹಾಗೆ. ನೋಡು. ನಾನೂ ಮೊದಲು ಮೊದಲು ಹಾಗೇ ಇದ್ದೆ. ನನ್ನಾಕೆ ಹುಟ್ಟಿದ ಹಬ್ಬದ ದಿನ ನಾನೂ ಅವಳಿಗೊಂದು Present ತರೋಣ ಅಂತ ಹೊರಟೆ. ಪೇಟೇಲಿ ಒಂದು ಮುತ್ತಿನ ಸರ ವ್ಯಾಪಾರ ಮಾಡಿ, ಮನೆಗೆ ತಂದು ನೋಡಿದರೆ ಅದು ಬರಿ ಕಾರಾಬಾಮಣೀದು ಅಂದು ಹೇಳಿದಳು. ಆಗ ಅವಳು ನನ್ನನ್ನ ದೃಷ್ಟಿಸಿ ನೋಡಿದ್ದು ನೆನೆಸಿಕೊಂಡರೆ ಮೈ ಝುಂ ಎನ್ನುತ್ತೆ. ಅವತ್ತೇ ನನಗೆ ವಾರ್ನಿಂಗ್ ಕೊಟ್ಟಳು "ಇನ್ನುಮೇಲೆ ಹುಟ್ಟಿದ ಹಬ್ಬಕ್ಕೆ ಯಾವ Presentಊ ತರಬೇಕಾಗಿಲ್ಲ ಅಂತ. ನೋಡಿದೆಯೇನಯ್ಯಾ?" ಅಂದ.

"ರಾಜ. ಈಗ ಅದೆಲ್ಲಾ ನನಗೆ ಬೇಡ. ಈಗ ನಡಿ. ಹಾಗೆ ಕೈಲಿ ಒಂದು ಇಪ್ಪತ್ತು ರೂಪಾಯಿ ಇಟ್ಟುಕೋ. ನಾನು ಇನ್ನಾರ ಹತ್ತಿರ ಕೇಳಲಿ? ಪೇಟೇಲಿ ಏನಾದರೂ ಒಳ್ಳೆ ಒಳ್ಳೆ ಸಾಮಾನೊಂದನ್ನ ನೋಡೋಣ. ಬಾ" ಎಂದೆ ಕಷ್ಟಪಟ್ಟು.

"ಓಹೋ! ಈಗ ತಿಳೀತು. ಏನೋರ ಬಂದ್ವಾಳೆ. ಹೋಗಲೀ ಬಿಡು. ನಿನ್ನಂಥಾ ಪತ್ನಿವ್ರತಾ ಶಿರೋಮಣಿಗಳ ಹೃದಯವನ್ನು ಏಕೆ ಕೆಡಿಸಲಿ. ನನ್ನ ಹತ್ತಿರ ಇರೋ ದುಡ್ಡೆಲ್ಲಾ ತೆಗೆದುಕೋ" ಅಂದ.

ಇಬ್ಬರೂ ಹೊರಟೆವು. ದುಡ್ಡು ರಾಜನ ಹತ್ತಿರವೇ ಇತ್ತು. ಪೇಟೆಗೆ ನುಗ್ಗಿ ಒಂದು ಬೆಳ್ಳಿ, ಚಿನ್ನದ ಅಂಗಡೀ ಎದುರಿನಲ್ಲಿ ನಿಂತೆವು. ನಾನು ಯೋಚನೆಮಾಡಿದೆ. ಏನಾದರೂ ಸಾಮಾನು ಇಲ್ಲಿ ಸಿಗುತ್ತೇನೋ ಅಂತ ರಾಜನಿಗೆ ಹೇಳಿ, ಅವನಿಗೆ ಸ್ವಲ್ಪ ದಿಗಲಾದರೂ ಒಳಕ್ಕೆ ನೂಕಿ ನಾನೂ ಒಳಕ್ಕೆ ನುಗ್ಗಿದೆ. ಅಂಗಡಿ ಒಳಗೆ ನೋಡಿ ನನಗೆ ಮೈ ನಡುಗಿತು. ಅಂಗಡಿ ಶೆಟ್ಟರು ಅಷ್ಟು ಸಾಮಾನನ್ನೂ ಎಲ್ಲಾದರೂ.... ಕದ್ದರೋ ಅಂತ ಸಂಶಯವಾಯಿತು. ಅಯ್ಯೋ, ನಾನೇ ಆ ಶೆಟ್ಟಿ ಆಗಿದ್ದಿದ್ರೆ ಇವತ್ತು ಅಲ್ಲಿರೋ ಚಿನ್ನದ ಸಾಮಾನೆಲ್ಲಾನೂ ಅವಳ ಹತ್ತಿರ ಕೊಡಬಹುದಾಗಿತ್ತಲ್ಲಾಂತ ಹಂಬಲಿಸಿದೆ. ಕೂಡಲೆ ಜೈಲು ಜ್ಞಾಪಕಕ್ಕೆ ಬಂತು. ಥೂ ಅದೆಲ್ಲಾ ಯೋಚನೆ ಮಾಡಬಾರದು ಅಂತ ರಾಜನ ಕಡೆ ತಿರುಗಿದೆ. ರಾಜ ಅಷ್ಟರಲ್ಲೇ ವ್ಯಾಪಾರ ಮುಗಿಸಿ ಏನೋ ಕಾಗದದ ಪಟ್ಟಣ ಜೇಬಿನಲ್ಲಿ ತುರುಕಿಕೊಳ್ಳುತ್ತಿದ್ದ. ನಾನವನನ್ನು ಕೇಳುವಷ್ಟ ರಲ್ಲೇ "ಬಾರೋ, ಹೊತ್ತಾಯ್ತು. ಪಾಪ ಊಟಕ್ಕೆ ಮನೇಲಿ ಕಾದಿರ್ತಾರೆ" ಅಂತ ಅಂಗಡಿಯಿಂದಾಚೆ ಎಳಕೊಂಡು ಬಂದ.

"ಅದಿರಲೋ, ಏನು ವ್ಯಾಪಾರ ಮಾಡಿದ್ದೀಯೋ" ಅಂದೆ.

"ಇರಲಿ, ನಿನಗ್ಯಾಕೋ. ಮುತ್ತಿನಸರವೇನಲ್ಲ. ನೀನೊಂದೂ ಯೋಚನೆ ಮಾಡಬೇಡ. ನಿನ್ನ ಹೆಸರಲ್ಲೇ ಓದಿಸುತ್ತೇನೆ. ಬಾ" ಅಂದ.

ನಾನು ಸುಮ್ಮನಾದೆ.

ಪುನೆ ಸೇರಿದೆವು. ಊಟವಾಯಿತು. ತಾಂಬೂಲವೂ ಆಯಿತು. ರಾಜ ಸುಮ್ಮನೇ ಇದ್ದ. ಇದ್ದಕ್ಕಿದ್ದ ಹಾಗೆಯೇ ರಾಜ ಎದ್ದು "ಇನ್ನು ನನಗೆ ಹೊತ್ತಾಯ್ತು. ಎಲ್ಲೋ ಹೋಗ್ಬೇಕು" ಅಂತ ಬಟ್ಟೆಗಳನ್ನು ಹಾಕಿಕೊಂಡ. ನನಗ್ಯಾಕೋ ಬಹಳ ದಿಗಿಲಾಯಿತು.

"ಇದೇನೋ ರಾಜ. ಅದೆಲ್ಲೋ" ಅಂತ ಕಣ್ಣು ಸನ್ನೆ ಮಾಡಿ ಮೆತ್ತಗೆ ಕೇಳಿದೆ.

"ಓಹೋ" ಅಂತ ರಾಜ ದೊಡ್ಡ ಧ್ವನಿಯಲ್ಲಿ ಶುರು ಮಾಡಿ "ನೀನು ಕೊಂಡು ಕೊಂಡ ಬೆಳ್ಳಿ ಸಾಮಾನೇನೋ. ಇಗೋ" ಅನ್ನುವಷ್ಟರಲ್ಲಿ ಅಡಿಗೆ ಮನೆಯಿಂದ ನನ್ನ ರಾಣಿ ಸಾಹೇಬರು ಹೊರಕ್ಕೆ ಬಂದರು.

ರಾಜ ಅವಳ ಕಡೆ ತಿರುಗಿ "ನೋಡಿ ಅಮ್ಮಾ, ಇವತ್ತು ನನ್ನ ಸ್ನೇಹಿತ ಇದನ್ನು ಕೊಂಡು ಕೊಂಡು ಬಂದ" ಅಂತ ಹೇಳಿ ಜೇಬಿನಿಂದ ಒಂದು ಕಾಗದದ ಪಟ್ಟಣ ಹೊರಕ್ಕೆ ತೆಗೆದ.

ಅವಳು ನನ್ನ ಕಡೆ ನೋಡಿದಳು.

"ಏನಿಲ್ಲ ನೋಡು. ದಾರೀಲಿ ಬರ್‍ತಾ ಸುಮ್ಮನೆ ತೆಗೆದುಕೊಂಡು ಬಂದೆ. ಇವತ್ತು ನಿನ್ನ ಹುಟ್ಟಿದ ಹಬ್ಬಾಲ್ವೇ" ಅಂದೆ.

ರಾಜ ಕಾಗದ ಪಟ್ಟಣ ನನ್ನ ಕೈಲಿಟ್ಟು ಪರಾರಿಯಾದ. ನಾವಿಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡು ಕಾಗದ ಬಿಚ್ಚಿ ನೋಡಿದೆವು. ನನ್ನ ಹೃದಯ ಎದೆಯಿಂದ ಈಚೆಗೆ ಬಂದಹಾಗಾಯಿತು. ನೋಡಿದರೆ ಒಂದು ಬೆಳ್ಳಿ....ಒಳಲೆ. ಅವಳು ನನ್ನ ಮುಖ ಒಂದು ನಿಮಿಷ ದೃಷ್ಟಿಸಿ ನೋಡಿ ರೂಮಿಗೆ ಸರ್‍ರೆಂದು ನುಗ್ಗಿದಳು.

"ನನಗೇನು. ನೀವಿಬ್ರೂ ಅವಮಾನ ಮಾಡಬೇಕೂಂತ ಮಾತನಾಡಿಕೊಂಡಿದ್ದೀರೋ" ಎಂದು ಮೂಗು ತಿರುಗಿಸಿದಳು.

ನಾನೇನು ಹೇಳಲಿ, ನಗಲೇ, ಅಳಲೇ ಕಡೆಗೆ ನಡೆದ ಸಂಗತಿಯೆಲ್ಲಾ ಹೇಳಿದೆ.

ಸ್ವಲ್ಪಹೊತ್ತು ಒಬ್ಬರೂ ಮಾತನಾಡಲಿಲ್ಲ.

ಕೊನೆಗೆ ನಾನೇ "ರಾಜ ತಪ್ಪು ಮಾಡಿದನೇ" ಅಂತ ಮೆತ್ತಗೆ ಕೇಳಿದೆ.

"ಖಂಡಿತವಾಗಿಯೂ ಇಲ್ಲ" ಎಂದು ನಗುತ್ತಾ ತಲೆ ಬಗ್ಗಿಸಿದಳು.

—"ಕೆ. ಕ್ಷ"






"ಕಣ್ಣು ಪರೀಕ್ಷೆಗೆ ಬಂದವರು ಕುರ್ಚಿಯ ಮೇಲೆ ಕೂರುವುದು."

# ಒಗ್ಗಟ್ಟು ಕಂಪೆನಿ

ಬರೆದವ : 'ಮೋಹನರಾಂ'

ಇನ್ನು ಊಟ ಮಾಡಿ ಆಗ ತಾನೇ ಕೈ ತೊಳೆದು 'ಉಸ್ಸಪ್ಪಾ' ಎಂದು ಹಾಸಿಗೆ ಮೇಲೆ ಬಿದ್ದುಗೊಂಡರೆ ಈ ಹಾಳು ಸೊಳ್ಳೆಗಳು ಬೇರೆ. ಗಾಯನ ನರ್ತನದ ಜೊತೆಗೆ ಅಲಿಂಗನ ಚುಂಬನಗಳಿಗೂ ಹೆಚ್ಚಿದವು. ಒಂದೆರಡರ ಬೇಟೆ ಮಾಡುವುದರೊಳಗೇ ಅದೇನೋ ದೂರದಲ್ಲೆಲ್ಲೋ ಗಲಿಬಿಲಿಯ ಶಬ್ದ—ಬೋನಿಗೆ ಬಿದ್ದ ಮೂಷಿಕ ತಂಡದ ಕಿರುಚಾಟದಂತೆ—ಕೇಳಿ ಬಂದಿತು. ಎದ್ದವನೇ ಮೈ ಮೇಲೊಂದು ಷರಟು ಹಾಕಿಕೊಂಡು ಹೊರಟೆ ಕಾಲೇಜುಮೈದಾನಕ್ಕೆ. ಏನೋ ಕಾಂಗ್ರೆಸ್ ಗಲಾಟೆ ಇರಬೇಕು. ಗಾಂಧೀಜಿಯವರ ಬಂಧನವಾಗಿ ೬ ತಿಂಗಳಾಯಿತಲ್ಲ. ಅದಕ್ಕಾಗಿ ಖಂಡನಾ ಸಭೆ ಏರ್ಪಡಿಸಿರುವರು ಎಂದಿದ್ದೆ. ಆದರೆ, ಅಲ್ಲಿ ನೋಡಿದರೆ ತ್ರಿವರ್ಣ ಧ್ವಜವೇ ಇಲ್ಲ. "ಗಾಂಧೀಕಿ ಜೈ" ಹೋಗಿ "ದಾಸಯ್ಯಾಕಿ ಜೈ" "ಏನೇ ಬರಲಿ ಒಗ್ಗಟ್ಟಿರಲಿ" "ಒಗ್ಗಟ್ಟು ಕಂಪೆನಿ ಜಿಂದಾಬಾದ್" ನನಗೆ ಏನೂ ತೋಚಲಿಲ್ಲ. ತಲೆಯಲ್ಲಿದ್ದ ಬುದ್ಧಿಯೆಲ್ಲಾ ಓಡಿ ಹೋಗಿ ತಲೆ ಬರಿದಾಯಿತು. ಮೂಗು ಅರಳಿತು. ತಿಳಿದೋ ತಿಳಿಯದೆಯೋ ಬಾಯಿ "ದಾಸಯ್ಯಾಕಿ ಜೈ" ಎಂದಿತು. ದೇಹ ಮುಂದೆ ನುಗ್ಗಿತು. ಎಲ್ಲೂನಿಲ್ಲದೆ ಮುಂದಿನ ಸಾಲಿಗೆ ಹೋದೊಡನೆಯೇ ಪೆಟ್ರೋಲು ಮುಗಿದ ಮೋಟಾರಿನಂತೆ, ಹೆಣ್ಣೋಡಿದ ಕಣ್ಣಿನಂತೆ ನಿಂತಿತು. ಯಾರೋ ಬಂದು ಕೈಯಲ್ಲಿ ಒಂದು ಚೀಟಿ ಎಸೆದು ಹೋದರು. ಆ ಚೀಟಿಯು ಈ ರೀತಿ ಇದಿತು.

ಸೇರಿರಿ—ಸುಸಮಯ.

ಏನೇ ಬರಲಿ, ಒಗ್ಗಟ್ಟಿರಲಿ.

ಒಂದಾಗಿ ಏಳಿ, ಒಂದಾಗಿ ಬೀಳುವೆವು.

— ಒಗ್ಗಟ್ಟು ಕಂಪೆನಿ —

ಸಂಚಾಲಕರು:—

ಶ್ರೀಮಾನ್ ಅ. ನಿಷ್ಠ ದಾಸಯ್ಯನವರು.

ಕಾರ್ಯದರ್ಶಿ:—

ಸ್ತ್ರೀ ಸಮೂಹ ಸಂಸೇವಕ, ಕರ್ನಾಟಕ ಕರಿಯ ಕುರಿಗಳ ಕೂಟದ ಕೂಮಾರ್ಗವ ತಾರಿ ಇತ್ಯಾದಿ ಬಿರುದಾಲಂಕಿತರಾದ

ಗೋಪಾಳಂ.

ಒಗ್ಗಟ್ಟಿನ ಉತ್ಪಾದಕರೇ, ಉತ್ಪತ್ತಿ ಕಾರಣಕರ್ತರೇ, ಅಂತೂ ಒಟ್ಟಿನಲ್ಲಿ ಒಗ್ಗಟ್ಟಾಗಿರುವ ಒಲವಿನ ಒಗ್ಗಟ್ಟಿಗರೇ.

ಇಂದೇ ಎಲ್ಲರೂ ಒಗ್ಗಟ್ಟಾಗಿ. ಶಾಲೆ ಕಾಲೇಜುಗಳ ಪರೀಕ್ಷೆಗಳ ಫಲಿತಾಂಶಗಳನ್ನೆದುರಿಸಿ. ಕಂಪೆನಿಯ ಸದಸ್ಯರಾಗಿ. ಶಾಲೆ ಕಾಲೇಜುಗಳ ಪರೀಕ್ಷೆಗೆ ಕೂರುವವರು ಎಷ್ಟು ಮಂದಿ? ಅವರಲ್ಲಿ ತೇರ್ಗಡೆಯಾಗುವರೆಲ್ಲೋ ಅಲ್ಪ ಸಂಖ್ಯಾತರು. ಬಹುಮಂದಿಗೆ ಬೆಲೆಯೇ ಇಲ್ಲ! ಇದನ್ನೆದುರಿಸಲು ಈ ಕಂಪೆನಿಯು ಸ್ಥಾಪಿತವಾಗಿದೆ. ಎಲ್ಲರೂ ತಕ್ಷಣ ಅದರ ಸದಸ್ಯರಾಗಿ ಏಳ್ಗೆಗೆ ಏಣಿಗಳಾಗಬೇಕೆಂಬುದು ಕಂಪೆನಿಯ ಕಳಕಳಿಯ ಕೇಳಿಕೆ.

ಪರವಾಗಿಲ್ಲ. ಈ ಯುದ್ಧಕಾಲದಲ್ಲೂ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸುವ ಕಂಪೆನಿ ಸ್ಥಾಪಿತವಾಯಿತಲ್ಲ ಎಂದು ಸಂತೋಷವಾಯಿತು. ಅದೂ ಅಲ್ಲದೆ ಹಿಂದೂಸ್ಥಾನ

ದಲ್ಲಿ ಇಂತಹ ಕಂಪೆನಿಗಳು ಹೆಚ್ಚಾಗಿ ಸೇರಿದಷ್ಟೂ ಸ್ವಾತಂತ್ರ್ಯವು ಸರಿಯುತ್ತದೆ. ಹರಿದಾರಿ ಹರಿದಾರಿ ಹತ್ತಿತು. ನಾನೂ ಸದಸ್ಯನಾಗೋಣವೆಂಬ ಇಚ್ಛೆಯುಂಟಾಯಿತು. ಅಷ್ಟರಲ್ಲೇ ಮೋಟರು ಟೈರು ಒಡೆದಂತೆ ಶಬ್ದವಾಯಿತು. ಇದೇನೆಂದು ನೋಡಿದರೆ, ಅ. ನಿಷ್ಟ ದಾಸಯ್ಯನವರು ಬೇಲಿಯ ಬದಿಯಲ್ಲಿ ನಿಂತು ಶಂಖವನ್ನೂದಹತ್ತಿದರು. ಅಯ್ಯೋ, ಮರೆತೆ. ಶಂಖವಲ್ಲ, ಕಹಳೆ. ಒಂದಾಗುವುದಕ್ಕೆ ಕರೆ. ಶಂಖದಕರೆಯಾದ ನಿಮಿಷನೆರಡು ನಿಮಿಷಗಳಲ್ಲೇ ವಿಚಿತ್ರವಾದ ಶಬ್ದವಾಯಿತು. ಏಟು ತಿಂದ ನಾಯಿಯೋ ಏ. ಆರ್. ಪಿ. ಸೈರನ್ನೋ ಅರಚುತ್ತಿದೆ ಎಂದಿದ್ದೆ. ಕಣ್ಣು ತರೆದು ನೋಡಲು ಕಾಣ್ಬಂದಿತು ಗೋಪಾಳಂರು ಮಾತಿನ ಮುತ್ತಿನ ಮಳೆಗರೆಯುತ್ತಿರುವರೆಂದು. ಸೋನೆ ಮಳೆ ಬೀಳುವಾಗ ಹನಿಹನಿಗೆ ಕಾಲಾಂತರವು ಹೇಗೋ ಹಾಗೆಯೇ ಇವರ ಮಾತಿನ ಮುತ್ತಿನಲ್ಲೂ.

"ಇಂದು-ನಾವು-ಇಲ್ಲಿ-ಸಭೆ-ಸೇರಿರುವುದು-ಏತಕ್ಕೆಂದರೆ-ಒಗ್ಗಟ್ಟಿನ- ಅಲ್ಲ - ಒಗ್ಗಟ್ಟು-ಕಂಪೆನಿಯ-ಸ್ಥಾಪನೆಗಾಗಿ. ಇದರ-ಸಂಚಾಲಕರು-ನಮ್ಮೆಲ್ಲರ-ಚಿರ-ಪರಿಚಿತ-ಅ. ನಿಷ್ಟ-ದಾಸಯ್ಯನವರು. ಇವರು ನಮ್ಮ-ಕಾಲೇಜಿಗೆ-ಹೊಸಬರಲ್ಲ. ಅದಕ್ಕೆ -ಒಂದೇ-ಅಲ್ಲ. ಎರಡು ನಿದರ್ಶನ. ಹಳೆಯ-ರಿಜಿಸ್ಟರು - ಗಳೆರಡರಲ್ಲೂ - ಇವರ - ನಾಮಧೇಯವು - ಅಚ್ಚಳಿಯದಂತೆ - ಇನ್ನೂ- ಓದುಗರ-ಮುಖದ-ಮೇಲೆ-ಹೊಡೆಯುವಂತೆ-ಕಾಣುತ್ತದೆ. ಇವರ-ಸಹಪಾಠಿ -ಗಳಲ್ಲಿ-ಎಲ್ಲರೂ-ಅಲ್ಲ-ಒಬ್ಬರು - ಇದೇ - ಕಾಲೇಜಿನಲ್ಲಿ- ಇವರಿಗೇ - ಉಪಾಧ್ಯಾಯರಾಗಿ-ಮೂರು-ಅಲ್ಲ-ನಾಲ್ಕು-ಶುಭ-ಸಂವತ್ಸರಗಳು-ಸಂದಿವೆ. ಅಂತೂ-ಒಟ್ಟಿನಲ್ಲಿ-ಇವರು-ಕಾಲೇಜಿಗೂ-ಕಾಲೇಜು-ಕುಮಾರ-ಕುಮಾರ್ತೆಯರಿಗೂ-ಸೇವಿಸಿರುವ- ಅಲ್ಲ-ಸಲ್ಲಿಸಿರುವ-ಸೇವೆಯು - ಅತ್ಯಮೋಘವಾದುದು. ಇನ್ನು-ಎಲ್ಲರೂ-ಒಂದುಬಾರಿ ಸ್ಲೋಗಗಳು-ಅಲ್ಲ-ಸ್ಲೋಗನ್ನು-ಕೂಗಿ - ಅ. ನಿಷ್ಟ-ದಾಸಯ್ಯನವರನ್ನು-ಭಾಷಣ-ಮಾಡಿ-ಎಂದು-ಪ್ರಾರ್ಥನೆ-ಅಲ್ಲ-ಪ್ರಾರ್ಥಿಸಿ-ಕೊಳ್ಳೋಣ. "ಬೋಲೋ ದಾಸಯ್ಯಕಿ ಜೈ", "ಏನೇ ಬರಲಿ ಒಗ್ಗಟ್ಟಿರಲಿ", "ಒಗ್ಗಟ್ಟು ಕಂಪೆನಿ ಜಿಂದಾಬಾದ್" ಸ್ಲೋಗನ್ನಾದ ಮೇಲೆ ಕಾರ್ಯದರ್ಶಿಗಳು ನಗೆಯಿಂದ ಉಬ್ಬಿದ ಮುಖವುಳ್ಳವರಾಗಿ ಬೇಲಿಯ ಪಕ್ಕದಲ್ಲಿ ಮುದುರಿಕೊಂಡಿದ್ದ ಅ. ನಿಷ್ಟ ದಾಸಯ್ಯನವರನ್ನು ಎಬ್ಬಿಸಿದರು. ಅವರು ಗುಡುಗಿನ ಗಡಸು ದನಿ ಗಂಟಲು ಕಟ್ಟಿದ ಗಂಡಸು ದನಿಯಲ್ಲಿ ತಮ್ಮ ಭಾಷಣವನ್ನು ಈ ರೀತಿ ಅಪ್ಪಣೆ ಕೊಡಿಸಿದರು.

"ಬಂಧುಗಳೇ-ಹುಜ್ಜ-(ಅವರಿಗೆ ಗಂಟಲು ಕಟ್ಟಿದ್ದುದರಿಂದ ಕುದುರೆ ಕೆನೆದಂತೆ ಕೆನೆದು ಕೊರಳ ಕೆರೆತವನ್ನು ಕತ್ತರಿಸುತ್ತಿದ್ದರು) ನಾವು ಈಗ ಸಭೆಯನ್ನು ಏರ್ಪಡಿಸಿರುವುದು ನಿಮಗೆಲ್ಲರಿಗೂ ತಿಳಿದ ವಿಷಯವಾದ್ದರಿಂದಲೇ ನೀವಿಲ್ಲಿಗೆ ಬಂದಿದ್ದೀರಿ. ದೂರದಿಂದೆಲ್ಲೋ 'ಕೇಳಿ' ಎಂದು ಯಾರೋ ಕೂಗಿಕೊಂಡರು. ಎಲ್ಲರೂ ಕರತಾಡನ ಮಾಡಿದರು. "'ಕೇಳಿ' ಎಂದು ಒಬ್ಬರೇ ಕೂಗುವುದು ಕಂಪೆನಿಯ ಕಾನೂನಿಗೆ ವಿರುದ್ಧ. ಆದ್ದರಿಂದ ಎಲ್ಲರೂ ಒಟ್ಟಿಗೆ 'ಕೇಳಿ, ಕೇಳಿ' ಎಂದು ಮೂರು ಬಾರಿ ಕೂಗಬೇಕು. ಶ್ರೀ|| ಗೋಪಾಳಂರು ಅದನ್ನು ಪ್ರಾರಂಭಿಸುವರು." ಶ್ರೀ||

ಗೋಪಾಳಂರು ಎದ್ದು ನಿಂತು ಹೆಂಗಳೆಯಕ ಹೆರಳಿನ ಮೇಲೆ ದೃಷ್ಟಿಯಿಕ್ಕಿ "ಕೇಳಿ, ನೋಡಿ, ಕೇಳಿ" ಎಂದು ನಿಮಿಷಕ್ಕೊಂದಾವರ್ತಿ ಕೂಗಿದರು. ಆ ಮೇಲೆ ದಾಸಯ್ಯನವರು ತಮ್ಮ ಭಾಷಣವನ್ನು ಮುಂದುವರಿಸಿದರು.

"ಈಗ ನನ್ನ ಭಾಷಣವಿಷ್ಟೇ. ನಾಳೆಯ ದಿನದಿಂದ ನಮಗೆಲ್ಲರಿಗೂ ಪರೀಕ್ಷೆಯು ಪ್ರಾರಂಭಿಸುತ್ತದೆ. 'ಏನೇ ಬರಲಿ, ಒಗ್ಗಟ್ಟಿರಲಿ' ಎಂಬ ನಮ್ಮ ಧ್ಯೇಯವನ್ನು ಒರೆ ಹಚ್ಚಿ ಪುಟ ಹಾಕಲು ಸುಸಮಯ. ನಾವೇನೋ ಎಲ್ಲರೂ ಪರೀಕ್ಷೆಗೆ ಹೋಗಿ ಕುಳಿತುಕೊಳ್ಳುತ್ತೇವೆ. ಆದರೆ ವಿಶ್ವಪೀಡಯ್ಯನವರು, ನಮ್ಮ ಕಾಲೇಜಿನ ಪ್ರಿನ್ಸಿಪಾಲರು ಎಲ್ಲರನ್ನೂ ಮುಂದಿನ ತರಗತಿಗೆ ದಬ್ಬುವುದಿಲ್ಲ. ಕೆಲವರನ್ನು ದಬ್ಬುವುದರಲ್ಲೇ ಕೈಕಾಲು ತಣ್ಣಗಾಗಿ ಅಯ್ಯರ್ ಬಿಲ್ ಏರುತ್ತದೆ. ಅವರ ಇಷ್ಟ ವಿರುದ್ಧ ನಮ್ಮ ದೇಹಗಳನ್ನು ನಾವೇ ದಬ್ಬುವುದು ಸರಿಯಲ್ಲ, ಸಾಧ್ಯವೂ ಇಲ್ಲ. ಸಾಹಸಿಗಳ ಕೃತ್ಯವೇ ಅಲ್ಲ. ಅದೂ ಅಲ್ಲದೆ ನಮ್ಮನ್ನು ನಾವೇ ಮುಂದಕ್ಕೆ ದಬ್ಬಿಕೊಳ್ಳುವುದು ನಮ್ಮಂತಹರ ಉನ್ನತ್ತತ್ವಪ್ರತಿಷ್ಠೆಗೆ ಧಕ್ಕೆ, ಕಳಂಕಗಳನ್ನು ತರುವಂತಹುದು. ಎಲ್ಲರೂ ಇಂದೇ ಒಗ್ಗಟ್ಟಾಗೋಣ. ಇಲ್ಲವೆ ಎಲ್ಲರೂ ತೇರ್ಗಡೆಯಾಗಬೇಕು. ಅಲ್ಲವೇ ಎಲ್ಲರೂ ಹಿಂದುಳಿಯಬೇಕು. ಎಲ್ಲರೂ ತೇರ್ಗಡೆಯಾಗುವುದು ಅಸಂಭವ, ಅಸಾಧ್ಯ, ಅತ್ಯಂತ-ಇನ್ನು 'ಅ'ಕಾರಗಳಿಂದ ಆರಂಭವಾಗುವ ಪದಗಳು ಅನಿತ್ಯವಾಗಿವೆ. ಆದುದರಿಂದ ಎಲ್ಲರೂ ನಾವು ಯಾವ ತರಗತಿಯಲ್ಲಿದ್ದೇವೋ ಅಲ್ಲಿಯೇ ಉಳಿಯಬೇಕು. ಆಗಲೇ ನಮಗೆಲ್ಲರಿಗೂ ಮುಕ್ತಿ. ಇದೂ ಅಲ್ಲದೆ ನಾವು ಸಮತಾತತ್ವವನ್ನು ಪಾಲಿಸಿದಂತಾಗುತ್ತದೆ. 'ಎಲ್ಲರೂ ಒಂದು' ಎಂಬ ತತ್ವವನ್ನು ಪ್ರತಿಪಾದಿಸಿದವರಲ್ಲಿ ನಾವೂ ಸೇರುತ್ತೇವೆ. ಮುಗ್ಗಟ್ಟಿಗೆ ಒಗ್ಗಟ್ಟೇ ಮದ್ದು. ನಾನು ಇದೇ ಒಗ್ಗಟ್ಟು ಕಂಪೆನಿ ಸ್ಥಾಪನೆ ಮಾಡಿದ ದಿನ ಒಂದು ಪ್ರಚಂಡ ಕವಿತೆ ಬರೆದಿದ್ದೇನೆ. ಅದನ್ನು ಈಗ ನಿಮ್ಮ ಮುಂದೆ ಓದುತ್ತೇನೆ. ಆ ಮೇಲೆ ಎಲ್ಲರೊಂದಿಗೆ ಆ ಕವಿತಾನಿಧಿಯನ್ನು ಸೂರೆಗೊಳ್ಳೋಣ. ಇದೋ—ಇದೇ—ಅದು.

"ಒಂದಾಗಿ ನಿಲ್ಲುವೆವು, ಒಂದಾಗಿ
ಕೂರುವೆವು,
ಒಂದಾಗಿ ಬೀಳುವೆವು, ಒಂದಾಗಿ
ಸಾಯುವೆವು."

ಎಲ್ಲರೂ ಅದನ್ನು ಸರಾಗವಾಗಿ ಅಂದ ಮೇಲೆ ಹಾಗೆಯೇ ಸುತ್ತ ನೋಡಿದೆ. ಸುತ್ತಲಿನ ಮರಗಳ ಎಲೆಗಳೆಲ್ಲಾ ರಾಗ ವಾಹಿನಿಯಲ್ಲಿ ಮುಳುಗಿ ತೇಲಾಡಿ ತಮ್ಮ ಎಲೆಗಳನ್ನೆಲ್ಲಾ ಉದುರಿಸಿ ಬೋಳು ಬೋಳಾಗಿ ನಿಂತು ಗೋಳಾಡುತ್ತಿದ್ದುವು. ದಾಸಯ್ಯನವರು ಮುಂದುವರಿಸುತ್ತಾ "ಈ ಪ್ರಪಂಚದ ಕಷ್ಟಕ್ಕೆಲ್ಲಾ ಮುಗ್ಗಟ್ಟೇ ಕಾರಣ. ಮುಗ್ಗಟ್ಟಿಗೆ ಒಗ್ಗಟ್ಟೇ ಮದ್ದು. ಒಗ್ಗಟ್ಟುಕಂಪೆನಿಯ ಸದಸ್ಯತ್ವವೇ ಗುರುತು. ಈಗ ಸದಸ್ಯರಾದವರು ಎಲ್ಲರೂ ಫೇಲಾಗಬೇಕು. ಕಡೆಯ ಪಕ್ಷ ಒಂದು ಭಾಗದಲ್ಲಾಗಲೀ ಫೇಲಾಗಬೇಕು. ಇಂದು ನಾವೆಲ್ಲರೂ ಆ ರೀತಿ ದೃಢ ಸಂಕಲ್ಪ ಮಾಡಿದರೆ ಯಾರೂ ಅದನ್ನು ಮಾರ್ಪಡಿಸಲಾರರು. ಕಾಲೇಜಿನವರು ಕೆಲವರನ್ನು ಮುಂದಿನ ತರಗತಿಗೆ ದಬ್ಬಬಹುದು. ಆಗ ಆ 'ಕೆಲವರ' ಜತೆಗೆ ಹಲಬರು ಹೋಗಿ ಕಾಲೇಜು ಬಾಗಿಲಿನಲ್ಲಿ, ವರಾಂಡದಲ್ಲಿ ಮತ್ತು ಕ್ಲಾಸಿ

ನಲ್ಲಿ ಉಪವಾಸವ್ರತದ ಜೊತೆಗೆ ಪಿಕೆಟಿಂಗನ್ನೂ ನಡೆಸಬೇಕು. ಆ ರಾ ರು ನ್ಯಾಯ, ಧರ್ಮ, ಅನ್ಯಾಯ, ಅಧರ್ಮ, ಸತ್ಯ, ಅಸತ್ಯ, ನಿತ್ಯ, ಅನಿತ್ಯ, ನಿಷ್ಟ, ಅನಿಷ್ಟ ಇವುಗಳ ವಿವೇಚನಾವಿರಕ್ತರಾಗಿ ಹೊಟ್ಟೆ ಸೊಂಟಾದಿಗಳನ್ನು ಕಟ್ಟಿ ಮುಂಬರುತ್ತಾರೋ, ಅವರೆಲ್ಲರೂ ಮೆಂಬರುಗಳು. ಆರು ಸದಸ್ಯರಾಗಲು ಬಯಸುವರೋ ಅವರ ಬಯಕೆ ತೀರಿಸಲು ಗೋಪಾಳಂರವರು ಬರುವರು. ಇಷ್ಟು ಹೇಳಿ ಎಲ್ಲರೂ ಕಂಪೆನಿಯ ಸದಸ್ಯರಾಗಿ ಒಗ್ಗಟ್ಟಾಗಿ ಬಾಳಬೇಕು ಇಲ್ಲವಾದರೆ ಸಾಯಬೇಕು ಎಂದು ಹೇಳಿ ನನ್ನ ಈ ಅಮೋಘ ಭಾಷಣವನ್ನು ಮುಗಿಸುತ್ತೇನೆ.

ಪುನಃ ಸ್ಲೋಗನುಗಳ ಸುರಿಮಳೆ. ಗೋಪಾಳಂರು ಎದ್ದು ನಿಂತರು. ತಕ್ಷಣ ಚಪ್ಪಾಳೆಗಳು ಅವರ ಮುಖಕ್ಕೆಮಾತ್ರವೇ ಏಕೆ ಮೈ ಮೇಲೂ ಹೊಡೆಯುವಂತೆ ಬಿದ್ದವು. "ಸಭಿಕರೆ-ಇಂದು-ನಮಗೆ-ಅಮೋಘವಾದ-ಭಾಷಣವನ್ನು-ಪಾನ-ಮಾಡಿಸಿದ್ದಕ್ಕಾಗಿ-ಸಭೆಯು-ಅಲ್ಲ-ನಾನು - ಸಭೆಯ-ಪರವಾಗಿ-ಅ. ನಿಷ್ಟ-ದಾಸಯ್ಯನವರಿಗೆ-ಇವೆರಡು-ಬಿರುದುಗಳನ್ನು-ಕೊಡುವೆನು. ಮೊದಲನೆಯದು ಒಗ್ಗಟ್ಟು ಕಂಪೆನಿ ಉದರ ಪೋಷಣಾಚಾರ್ಯ. ಎರಡನೆಯದು ಯುಕ್ತಾಯುಕ್ತವಿವೇಚನಾವಿರಕ್ತ ಅಜ್ಞಾನಯೋಗಿ. ಇವುಗಳನ್ನು-ಸ್ವೀಕಾರ-ಅಲ್ಲ-ಸ್ವೀಕರಿಸಿ - ಅಲಂಕರಿಸಿಕೊಳ್ಳಬೇಕೆಂದು-ನನ್ನ ಪ್ರಾರ್ಥನೆ. ಎಲ್ಲರೂ-ಈಗ-ಕಂಪೆನಿಯ-ಗೀತೆಯನ್ನು-ಹಾಡಿ-ಮನೆಗೆ-ಹೋಗಬೇಕೆಂದು-ನನ್ನ-ಸೂಚನೆ."

"ಒಂದಾಗಿ ನಿಲ್ಲುವೆವು, ಒಂದಾಗಿ ಕೂಡುವೆವು, ಒಂದಾಗಿ ಬೀಳುವೆವು, ಒಂದಾಗಿ ಸಾಯುವೆವು" ಜಯಕಾರಗಳೊಡನೆ ಸಭೆಯು ಮುಕ್ತಾಯವಾಯಿತು.

ನಾನೂ ಕಂಪೆನಿಯ ಏಜಂಟ್. ಆರಾದರೂ ಸದಸ್ಯರಾಗುವವರಿದ್ದರೆ ಈ ಕೆಳಗಿನ ವಿಳಾಸಕ್ಕೆ ಮುಖೇನ ಇಲ್ಲ ಮುಖೇಡಿಗಳಾದರೆ ಪತ್ರೇನ ಬರೆಯಿರಿ.

ಏಜಂಟ್,

ಕೊರವಂಜಿ ಗಲ್ಲಿ,

ಕಾಳೂರು.



## “ಹೊಸ ವರ್ಷದ ಬಹಿರಂಗ ಪತ್ರ”

# ಅಗಸನಿಗೆ

ಅಯ್ಯಾ ಅಗಸ,

ಹೊಸ ವರ್ಷದ ಆರಂಭದಲ್ಲಿ ಎಲ್ಲರಿಗೂ ಬರೆದಂತೆ ಬರೀ ಕುಶಲ ಸಮಾಚಾರದ ಪತ್ರವನ್ನು ನಿನಗೆ ಬರೆಯಲು ಮನಸ್ಸೂ ಇಲ್ಲ, ವಾಡಿಕೆಯೂ ಇಲ್ಲ. ನನ್ನ ಮನಸ್ಸಿನಲ್ಲಿದ್ದುದನ್ನು ಹಾಗೆಯೇ ಬರೆಯಲು ಕೈ ಹಾ ತೊರೆಯುತ್ತಿದೆ. ಕಳೆದ ವರ್ಷ ನೀನು ನನ್ನ ಸಲುವಾಗಿ ದುಡಿದುದಕ್ಕೆ ನನ್ನ ಧನ್ಯವಾದಗಳನ್ನು ಅರ್ಪಿಸಲೇ ಬೇಕು.

ಈಗ ನಾನು ಹಾಕಿಕೊಳ್ಳಲು ಒಂದೇ ಅಂಗಿ. ನಿನ್ನ ಕೈಗಾರಿಕೆಯಿಂದಲೇ ಇದು ಸಾಧ್ಯವಾದುದು. ಅದಕ್ಕಾಗಿ ಮೊದಲು ವಂದನೆಗಳು. ಮೊದಲೆಲ್ಲಾ ಹಲವಾರು ಅಂಗಿಗಳಿದ್ದಾಗ ಬೆಳಗಾದರೆ ಯೋಚನೆ. ಇವತ್ತು ಯುಗಾದಿ ಬಿಳಿ ರೇಷ್ಮೆಯ ಅಂಗಿಯನ್ನು ತೊಡಲೆ, ಕರಿ ಅಲ್ಪಾಕ ಅಂಗಿಯನ್ನು ಹಾಕಲೆ? ನಾಳೆ ಭಾವೀ ಮಾವನವರು ಮನೆಗೆ ಬರುತ್ತಾರೆ. ನೇವಿಬ್ಲೂ ಹಾಕಲೆ? ಇಂದು ಮಡದಿಯನ್ನು ಮೊದಲು ನೋಡುವ ದಿನ, ಮಖಮಲ್ ಅಂಗಿ ತೊಡಲೇ—ಈ ರೀತಿ ಹಬ್ಬಹಬ್ಬಕ್ಕೂ, ಪ್ರತಿ ಸನ್ನಿವೇಶಕ್ಕೂ ಯೋಚನಾಪರನಾಗುತ್ತಿದ್ದೆ. ನಿನ್ನ ದಯದಿಂದ ಈಗ ಅದೊಂದೂ ಯೋಚನೆ ಇಲ್ಲ. ಇದ್ದುದೊಂದಂಗಿಯನ್ನು ಸಿಕ್ಕಿಸಿಕೊಂಡರೆ ಆಯಿತು.

ಅಲ್ಲದೆ ಯುಗಾದಿ ಹಬ್ಬಕ್ಕೆ ಏನು ಬೇಕು ಎಂದು ನನ್ನ ಹಿರಿಯರು ಕೇಳಿದಾಗ ಎರಡನೇ ಆಲೋಚನೆ ಇಲ್ಲದೆ ಅಂಗಿ ಎಂದು ಧೈರ್ಯವಾಗಿ ಹೇಳುವಂತಾಯ್ತು. ಮೊದಲು ಮೊದಲು ಈ ಯುಗಾದಿ ಬಂದರೆ, ಈ ಉಡುಗೊರೆಯ ಯೋಚನೆ ಬಹಳವಾಗಿ ಕಾಡುತ್ತಿತ್ತು. ಈಗ ಆ ಗೋಳೇ ಇಲ್ಲ. ಒಮ್ಮೆ ಸ್ಟಾಲಿನ್‌ಗ್ರಾಡನ್ನು ಹಿಡಿಯ ಹೊರಟ ಗೋರಿಂಗನು ಇಂದು ಯಾವ ಅಂಗಿ ಯಾವ ಮೆಡಲನ್ನು ಧರಿಸಲಿ ಎಂಬ ಆಂದೋಲನಕ್ಕೆ ಸಿಕ್ಕಿ ಮನಸ್ಸನ್ನು ಸ್ಥಿರಮಾಡುವ ಹೊತ್ತಿನಲ್ಲಿ ರಷ್ಯನರು ಜರ್ಮನರ ಪಡೆ ಪಡೆಯನ್ನೇ ಹಿಂದಕ್ಕಟ್ಟಿದರಂತೆ. ನಾಯಕನ ಅಂಗಿ ತರ್ಕವೇ ಇದಕ್ಕೆ ಮುಖ್ಯ ಕಾರಣ ಎಂಬುದು ಚರಿತ್ರಾರ್ಹ ವಿಷಯ. ಇದ್ದುದರಲ್ಲಿ ಸಂತುಷ್ಟನಾಗುವ ಸುಗುಣವನ್ನು ಕಾರ್ಯತಃ ಕಲಿಸಿದವನೆಂದರೆ ನೀನೆ. ಮೊದಲು ಮೂರು ಷರಟುಗಳಿದ್ದರೂ ನಿರ್ಮಲ ಷರಟಿಲ್ಲವಲ್ಲಾ ಎಂದು ಕಂಬನಿಗೆರೆಯುತ್ತಿದ್ದೆ. ಮನೆಯವರಲ್ಲಿ ರೇಗುತ್ತಿದ್ದೆ. ಒಂದು ಷರಟನ್ನು, ಒಳ್ಳೆಯ ಬುದ್ಧಿಯಿಂದ ನೀನು ಎರಡನ್ನಾಗಿ ಮಾಡಿ ತಂದು, ಇನ್ನೊಂದಕ್ಕೆ ಅಲ್ಲಲ್ಲೇ ನೀಲಿಬಣ್ಣವನ್ನಿತ್ತು ತಂದ ತರುವಾಯ ಏಕಾಂಗಿಯೂ ಅಲ್ಲದೇ ಏಕ ಷರಟೂ ಆಗಿದ್ದೇನೆ. ಮಿತವ್ಯಯವನ್ನೂ ಈ ರೀತಿ ಬೋಧಿಸಿದ ಸದ್ಗುರುವೇ ನಿನಗೆ ನಮೋ! ನಮೋ!

ಇವೆಲ್ಲವೂ ಸಣ್ಣ ವಿಷಯಗಳು. ದೊಡ್ಡ ವಿಷಯ ಬೇರೊಂದು. ನನ್ನ ಬಟ್ಟೆಗಳ ಮೇಲೆ ನೀನು ಮಾಡುವ ಗುರುತುಗಳು ಮನೋರಂಜಕ. ಇವತ್ತು ನಾಲ್ಕು ನಾಲ್ಕು ಚುಕ್ಕೆಗಳನ್ನು ನಾಲ್ಕು ಮೂಲೆಗೂ ಇಟ್ಟು ನನ್ನದೆಂದು ಗುರ್ತಿಸುತ್ತಿ. ಮುಂದಿನ ವಾರ, ಧೂಮಕೇತುವು ಕಾಣಿಸಿಕೊಂಡ ಪ್ರಯುಕ್ತ ಶಾಂತಿಗಾಗಿಯೋ ಏನೋ, ಒಂದು ಚುಕ್ಕೆ ಒಂದು ಬಾಲ ಗುರ್ತಿಸಿ, ಆ ಬಟ್ಟೆಗೇ ಅಪಘಾತ ಕಾರಣನಾಗುತ್ತೀ. ಹಿಟ್ಲರನು ದೇಶದ್ರೋಹಿ ಎಂದು ಸಾರಲೋಸುಗ, ಸ್ವಸ್ತಿಕದ ಚಿಹ್ನೆಯನ್ನು ಬರೆದು ಅಲ್ಲಿಯೇ ಪಂಚೆಯನ್ನು ಹರಿದುಹಾಕುವಿ. ನಾನು ಹಣ ಕೊಟ್ಟ ವಾರ, ನನಗೆ ಸಂತೋಷವಾಗಲೆಂದೋ ಏನೋ ವಿಶಿಷ್ಟಾದ್ವೈತಗಳ ಗುರುತು ಮಾಡುವಿ. ನಿನ್ನ ಗುರುತಿನಿಂದಲೇ ಆ ವಾರ ನಿನ್ನ ಮನೋಗತಿಯನ್ನು ತಿಳಿಸುತ್ತೀ. ನಮ್ಮನೆಯಲ್ಲಿ ಇದೇ ಮಾನಸಿಕ ವ್ಯಾಯಾಮವಾಗಿ ಹೋಗಿದೆ.

ನಿನ್ನ ಚತುರತೆಗಾಗಿ ನನ್ನ ಲೇಖನಿಯೂ ಕವಿಯಾಗುತ್ತಿದೆ.

ಗುಂಡಿಗಳ ಒಡೆದಂತೆಂಬರ
    ಗಂಡ ನಮೋ! ನಮೋ!
ಕಂಡಿ ಕಂಡಿಯನು ಕಂಡಲ್ಲೆಲ್ಲಾ
    ಕಾಣಿಪ ಭಂಟ ನಮೋ ನಮೋ
ಒಂದನ್ನೆರಡಾಗಿ ಮಾಳ್ಪ ಮಾಯ
    ಗಾರ ನಿನಗೆ ನಮೋ ನಮೋ
ಅಂಗವಸ್ತ್ರಕೆ ರಂಗನ್ನೇರಿಪ
    ಕಲಾಶಿಲ್ಪಿಯೆ ನಮೋ ನಮೋ
ಜೇಬಿನ ತಳವೇ ಇಲ್ಲವೆನಿಪ
    ಸ್ವಾಮಿಯೆ ನಿನಗೆ ನಮೋ ನಮೋ
ಜೋಮಿಟ್ರಿ ಗುರುತನು ಮೂಲೆ ಮೂಲೆಗೂ
    ಸಾರಿಪ ಮಹಿಮನೆ ನಮೋ ನಮೋ.

ನೀನನ್ನಬಹುದು ಇದನ್ನೇಕೆ ಬಹಿರಂಗ ಪತ್ರ ಮಾಡಿದೀರಿ. ನನಗೇಕೆ ಟಪಾಲು ಹಾಕಲಿಲ್ಲ ಎಂದು ಟಪಾಲು ಚೀಟಿಗೂ ಕಾಸಿಲ್ಲದಂತೆ ಜೇಬನ್ನೂ ಅಸ್ಥಿರಮಾಡಿದ ಕಾರಣ ಹೀಗೆ ನಿನ್ನ ಅವಗಾಹನೆಗೆ ತರಬೇಕಾಯ್ತು.

ಇತಿ ನೊಂದವ
ನಿನ್ನ ಕ್ಷೇಮಕಾರಿ.



# ಹರಿಕಥೆ ದಾಸರ ಗಂಟು

ರಿಟೈರಾದ ಮೇಲೆ ನಾಗರಾಜರಾಯರೂ ಕೂಡ ಯಥಾಪ್ರಕಾರ ಭಗವದ್ಗೀತೆ, ಟಬ್ ಬಾತ್, ಈಸಿ ಚೇರು, ಕಥಾ ಕಾಲಕ್ಷೇಪ ಮುಂತಾದವುಗಳಲ್ಲೇ ಮಗ್ನರಾಗಿ ಮೊಮ್ಮಕ್ಕಳನ್ನು ಮುದ್ದಿಸುವುದನ್ನೇ ಮರೆತು ಬಿಟ್ಟಿದ್ದರು. ದಾಸೋಹಂ ದೀನೋಹಂ ಎಂದು ಹೇಳುತ್ತಾ ಅನೇಕರು ಬಂದು ಅವರ ಈಸಿ ಚೇರಿನ ಹತ್ತಿರದ ಸ್ಟೂಲಿನ ಮೇಲೆ ಕೂತು ಕೊರಗುವರು. ಅವರೆಲ್ಲರಿಗೂ ನಾಗರಾಜರಾಯರದು ಒಂದೇ ಪುಸುಗುಟ್ಟು! "ಅಲ್ರಿ! ನಾನು ಅಧಿಕಾರದಲ್ಲಿದ್ದಾಗ ಬಂದು ಕಾಣಿಸಿಕೊಂಡಿದ್ದರೆ ಯಾರಿಂದಾದರೂ "ಶಾಖಾಯ ಶೀತಾಯ" ಏನಾದರೂ ಕೊಡಿಸುತ್ತಿದ್ದೆ. ಈಗ ಕಾಯೆಲ್ಲಾ ಉದುರಿದ ಮೇಲೆ ಕಲ್ಲು ಬೀರುತ್ತೀರಲ್ಲ....ನನ್ನ ಪೆನ್ಷನ್ ಹಣ ತಿಂಗಳಿಗೆ ೨೫೦ ರಲ್ಲಿ ನಾನೊಂದು ಬಿಡುಕಾಸೂ ನಿಮಗೆ ಕೊಡುವ ಹಾಗಿಲ್ಲ. ಅದನ್ನೆಲ್ಲಾ ಒಳಕ್ಕೆ ಕೊಟ್ಟುಬಿಟ್ಟು ನಾನಿಲ್ಲಿ ಹಾಯಾಗಿ ಮಲಗಿದ್ದೇನೆ, ನೋಡಿದಿರಾ" ಅಂದರೆ, ಹರಿಕಥೆ ದಾಸರು ಬಿಟ್ಟಾರೆ ತಾನೆ? "ಅವಾಗಂತೂ ಪ್ರಾಪ್ತಿವಿರಲಿಲ್ಲ ನಮಗೆ! ಈಗಲಾದರೂ ತಾವು ಸಬ್ ಡಿವಿಜನ್ ಆಫೀಸರಾಗಿದ್ದ ಕಡೆಗಳಲ್ಲಿ ತಮ್ಮ ಹೆಸರು ಹೇಳಿಕೊಂಡು ತಪ್ಪಲೆ ಕೂರಿಸುವ ಪಟೇಲು ಶ್ಯಾನುಭೋಗರು ಸಾವಿರಾರು ಜನ ಇರಬಹುದು. ಯಾರಾದರೊಬ್ಬರಿಗೆ ಒಂದು ಚೀಟಿ ಬರೆದು ಕೊಟ್ಟರೆ, ಯಃಕಶ್ಚಿತ್ ಉದರ ಪೂರಣವಾಗುತ್ತದೆ" ಎಂದು ದೇಶಾವರ ಮಾಡುತ್ತಾರೆ. ಸರಿ! ಆ ಮುಖಸ್ತುತಿಗೆ ಮರುಳಾಗಿ ರಾಯರು ಕಾಲುಗಳನ್ನು ನೆಲಕ್ಕೆ ತಗುಲಿಸಿ ಎದ್ದು ನಿಂತು ಪಂಚೆಯನ್ನು ಬಿಗಿಯಾಗಿ ಹಿಡಿದು ನಡೆದು ಕಾಗದ ಪೆನ್ಸಿಲುಗಳಿಗಾಗಿ ತಡಕಾಡಿ ಹಿಂತಿರುಗಿ ಮತ್ತೆ ಕುಳಿತು ಬಗ್ಗಿ ಬಾಗಿ ಗುದ್ದೂರು ರಾಮೇಗೌಡರ ಸಮಕ್ಷಮಕ್ಕೆ ಒಂದು ಕಾಗದ ಬರೆದು ದಾಸರ ಕೈಗೆ ಕೊಡುವಾಗ ಆಹಾ! ಅವರ ಆನಂದಕ್ಕೆ ಪಾರವೇ ಇಲ್ಲ, ಅನ್ನಿ.

ಗುದ್ದೂರು ರಾಮೇಗೌಡರಿಗೆ ಕಾಗದ ಓದಿದಾಗ ಮತ್ತೊಂದು ರೀತಿಯ ಆನಂದ. ಗರ್‌ಗರ್ ಅಂತ ನಮ್ಮ ಮೇಲೆಲ್ಲಾ ಸದಾ ಉರಿದು ಬೀಳುತ್ತಿದ್ದ ಈ ವಯ್ಯ ಈಗ ಕೋಲು ಊರಿಕೊಂಡು ಕೈಲಾಸಕ್ಕೆ ಹೋಗುವ ಕಾಲ ಬಂದಾಗ ಹಳ್ಳಿಯವರಿಗೆಲ್ಲಾ ತಿರುಪತಿ ವೆಂಕಟರಮಣನಿಗೆ ಮದುವೆ ಆದದ್ದು ಹೇಗೆ ಅಂತ ಹೇಳಿಸುವುದಕ್ಕೆ ಹೊರಟಿದ್ದಾನಲ್ಲಾ ಎಂಬ ಆಶ್ಚರ್ಯ ಒಂದು ಕಡೆ! ಎಲ್ಲಿಂದಲೋ ಧುಮುಕಿರುವ ಬಡ ದಾಸರಿಗೆ ಕಾಳಮ್ಮನ ಗುಡಿ ಮುಂದೆ ಮಾವಿನ ಸೊಪ್ಪು ಕಟ್ಟಿ ನೀರು ಚಿಮುಕಿಸಿ ಚಾಪೆ ಹಾಸಿ ಜನ ಜಮಾಯಿಸಿ ಹೂವಿನ ಹಾರ ಹಾಕಿ ಚಕ್ರನ ಬಾಯಲ್ಲಿ ಸಾರಿಸಿ....ಎಂಬ ಬೇಸರ ಒಂದು ಕಡೆ. ಮಧ್ಯಾಹ್ನ ಮೇಷ್ಟರು ಮಧ್ವೇಶಾಚಾರ್ ಮನೆಯಲ್ಲಿ ದಾಸರು ಭೋಜನಕ್ಕೆ ಕುಳಿತಾಗ ರಾಮೇಗೌಡ, ದೊಡ್ಡ ಹಟ್ಟಿ ಕೆಂಚ, ಚಿಕ್ಕ ಮಾರನ ಚಿಕ್ಕ, ಕುಳ್ಳ ಬೋರನ ಬೀರ, ಉಪ್ಪು ನೀರಿನ ಬಾವಿ ಗಿಡ್ಡ ಇವರನ್ನೆಲ್ಲಾ ತನ್ನ ಮನೆಗೆ ಕರೆದು ಎಳನೀರು ಕುಡಿಯುತ್ತಾ ದಾಸರ ಉಪ

ಚಾರಾದಿಗಳನ್ನು ಕುರಿತು ಚರ್ಚಿಸಿದ ಪಿಸುಪಿಸಾ ಗುಸುಗುಸಾ ಅಂತ ಪ್ರಾರಂಭ ವಾದ ಮಾತು ಬಿಡೋ ಕಂಡಿದ್ದೇನೆ ಎಂಬಷ್ಟು ಕಾವುಕೂಡಿ ತಲೆ ಹೊಡಿಯುವ ತಕರಾರು ವರೆಗೂ ಹತ್ತಿ ಮತ್ತೆ ಹಂಗೆ ಹಿಂಗೆ ಎಂಬವುಗಳ ಮೂಲಕ ಇಳಿದು ಆಗಲಿ ರಾಮೇಗೌಡ ಅದಕ್ಕೇನು, ನಮ್ಮ ಕೈಲಾದ ಸೇವೆ ನಾವೂ ಮಾಡುತ್ತೇವೆ. ಈವಾಗಲ್ಲದೆ ಇನ್ನು ಯಾವಾಗ, ಅವರವರ ಕರ್ಮ ಅವರವರು ಉಣ್ಣಲೇ ಬೇಕು— ಎಂಬಲ್ಲಿಗೆ ನಿಂತಿತು.

ರಾತ್ರಿ ೮-೩೦, ೯ ಇರಬಹುದು. ಧೂಮಕೇತು ಕಾಣಿಸುವ ಸಮಯ. ಆದರೆ, ಗುದ್ದೂರಿನಲ್ಲಿ ಒಬ್ಬರೂ ಆಕಾಶದ ಕಡೆ ತಲೆ ಎತ್ತಲೇ ಇಲ್ಲ. ಎಲ್ಲರೂ ಕ್ರಾಳಮ್ಮನ ಗುಡಿ ಮುಂದೆ ಕತ್ತಿನ ಸುತ್ತ ಹಾರ ಹಾಕಿಕೊಂಡು "ತಾಳಬೇಕು, ತಕ್ಕ ಮೇಳ ಬೇಕು" ಎಂದು ಹೇಳುತ್ತಿದ್ದ ದಾಸರ ಕಡೆಯೇ ನೋಡುತ್ತಿದ್ದರು. ತಾಳವೂ ಬೇಕು, ಕಿಸಗಿಂಸಾದ ಕಂಠವೂ ಬೇಕು, ಕಂಠದಿಂದ ಹೊರಡುವ ವಿಷಯಗಳು ಸಮಂಜಸವಾಗಿರಬೇಕು, ಎಂದು ಮಧ್ಯೇ ಶಾಚಾರರಿಗೆ ಅನ್ನಿಸಿತು. ಮಧ್ಯಾಹ್ನ ತಾನು ದಾಸರಿಗೆ ಅಷ್ಟೊಂದು ಮಜ್ಜಿಗೆ ಹುಳಿ ಬಡಿಸಬಾರದಾಗಿತ್ತು ಎಂದು ಮೇಷ್ಟರು ಪದೇಪದೇ (ಅಂದರೆ, ದಾಸರು ಹೇಳಿದ ಪದಗಳನ್ನು ಕೇಳಿದಾಗಲ್ಲೆಲ್ಲಾ) ಅಂದುಕೊಂಡರು. ಗತ್ಯಂತರವಿಲ್ಲ. ರಾತ್ರಿ ೧೨ರ ವರೆಗೆ ಕಥೆ ಎಳೆಯಿತು. ವೆಂಕಟರಮಣನ ಸಂಕಟ ಪರಿಹಾರವಾಯಿತು. ಕರಿಬೇವಿನ ಸೊಪ್ಪು ತರಲಿಲ್ಲ ಅಂತ ಪದ್ಮಾವತಿಯನ್ನು ಬೆಟ್ಟದ ಕೆಳಕ್ಕೆ ಅಟ್ಟಿ, ದೇವರು ಬೆಟ್ಟದ ಮೇಲೆ ಸುಖವಾಗಿ ನೆಲೆಸಿದ, ಅಂತ ದಾಸರು ಪವಮಾನ ಹಾಡಿದರು. ಅಂತು ದಾಸರು ಹಳ್ಳಿಯವರಿಗೆ ಒಳ್ಳೇ ನೀತಿ ಕಲಿಸಿದ ಹಾಗಾಯಿತು. ಪವಮಾನ ಶಬ್ದ ಕಿವಿಗೆ ಬೀಳುತ್ತಲೇ ರಾಮೇಗೌಡರೆದ್ದರು. ಗುಡಿಯ ಹಿಂಭಾಗದ ಮನೆಗೆ ಹೋದರು. ಮತ್ತೆ ಬಂದರು. ಯಾರೊಂದಿಗೋ ಏನೋ ಅಂದರು. ಮತ್ತೆ ಮರೆಯಾದರು. ಪುನಃ ಯಾರೊಂದಿಗೋ ಮಾತನಾಡಿದರು. ದಾಸರಿಗೆ ಅವರ ಮೇಲೆಯೇ ಕಣ್ಣು. ಶ್ರೀಮದ್ರಮಾರಮಣ ಅಂತ ಹೇಳಿ ಮುಗಿಸಿ ಕತ್ತಿಂದ ಹಾರ ತೆಗಿಯುವ ಸಮಯಕ್ಕೆ ಸರಿಯಾಗಿ ಗೌಡರು ಹತ್ತಿರ ಬಂದು ತಡೆದರು. ಪಕ್ಕದಲ್ಲೇ ನಿಂತು, "ಇವಯ್ಯ ನಮ್ಮ ನಾಗರಾಜರಾಯರ ಕಡೆಯವರು. ಅವರು ಇಲ್ಲಿ ಅಮಲ್ದಾರರಾಗಿದ್ದರು. ಸಬ್ ಡಿವಿಜನ್ ಆಗಿದ್ದರು. ನಮ್ಮ ಹಳ್ಳಿಯವರು ಅಂದರೆ ಅವರಿಗೆ ಅದೊಂದು ತರಹ; ಹಾಗೇನೇ ನಮಗೂ ಅವರು ಅಂದರೆ! ಕತೆ ಹೆಂಗಾದರೂ ಇರಲಿ, ನಾಗರಾಜರಾಯರ ಕಡೆಯವರು ಅಂದರೆ ಅವರಿಗೆ ಏನು ಕೊಡಬೇಕು, ನಮ್ಮ ಕೈಲಾದದ್ದು ಅಂತ ನಮಗೆ ಗೊತ್ತಿದೆ. ಲೋ! ಬೀರ, ತಕ್ಕೊಂಡು ಬಾ, ಇಲ್ಲಿ, ತಟ್ಟೇನ....ಇನ್ನು ಮೇಲೆ ಇಂತಹ ದಾಸರು ನಮ್ಮ ಹಳ್ಳಿಗೆ ಯಾರು ಬರುತ್ತಾರೋ ಯಾವಾಗ ಬರುತ್ತಾರೋ ನಾ ಕಾಣೆ. ಆದ್ದರಿಂದ, ತಕ್ಕೊಂಡು ಬಾರೋ ಇಲ್ಲಿ....ಈ ಇಪ್ಪತ್ತೈದು ರೂಪಾಯಿನ ನಿಮ್ಮೆದುರಿಗೆ ಇವಯ್ಯನಿಗೆ ಕೊಟ್ಟಿದ್ದೇನೆ....ಕೊಡೋ ಅವರ ಕೈಗೆ, ಎಣಿಸಿಕೊಳ್ಳಿ, ಬುದ್ಧಿ....ಇದನ್ನು ತಕ್ಕೊಂಡು ಹೋಗಿ ಅವರು ಮಕ್ಕಳುಮರಿ ಚಂದಾಗಿದ್ದರೆ ನಮಗೇನು ಹೊಟ್ಟೆಕಿಚ್ಚೇ?" ಅಂತ

ಭಾಷಣ ಮಾಡಿದರು. ದಾಸರು ಮನಸ್ಸಿನಲ್ಲೇ ನಾಗರಾಜರಾಯರ ಈಸಿ ಚೇರ್ ಮುಂದೆ ಮೂರು ನಮಸ್ಕಾರ ಹಾಕಿದರು. ಅದುವರೆಗೂ ಅವರೆಂದೂ ಅಷ್ಟು ಹಣ ಒಂದೇ ತಟ್ಟೆಯಲ್ಲಿ ಕಂಡಿರಲಿಲ್ಲ.

ಕಥೆ ಮುಗಿಸಿ ರಾತ್ರಿ ಮಲಗುವುದಕ್ಕೆ ಹೋದಾಗ ಮಧ್ವೇಶಾಚಾರ್ ಮನೆ ಹಜಾರದಲ್ಲೇ ರಾಮೇ ಗೌಡ ಹಾಜರ್! "ಪಟೇಲರೇ! ನನ್ನ ಯೋಗ್ಯತೆಗೆ ಮೀರಿ ನನಗೆ ನೀವು...." ಅಂತ ದಾಸರು ತುಟಿ ತೆರೆಯುವುದಕ್ಕೆ ಮೊದಲೇ "ಉಂಟೇ ಬುದ್ದೀ, ನಮ್ಮ ಧರ್ಮ ನಾವು ಮಾಡುತ್ತೀವೆ. ಆ ನಾಗರಾಜರಾಯರು ನಮಗೆ ಮಾಡಿರುವುದನ್ನೆಲ್ಲಾ ನೆನಸಿಕೊಂಡರೆ ನಾವು ನಿಮಗೆ ಈಗ ತೋರಿಸಿರುವುದು ಏನೇನೂ ಸಾಲದು. ಅದಕ್ಕೇ ನೋಡಿ, ಬುದ್ದಿ, ಇಲ್ಲಿ! ಗುಡ್ಡದಾಚೆ ಹೊಸಕೆರೆ ಗ್ರಾಮದ ಪಟೇಲನಿಗೊಂದು ಕಾಗದ ತಂದಿದ್ದೇನೆ. ನಾಳೆ ನೀವು ಅಲ್ಲಿ ಕತೆ ಮಾಡಿ, ಅಪಾರ ಜನ ಸೇರುತ್ತಾರೆ, ಸುಗ್ಗಿ ಬುದ್ದಿ ನಿಮಗೆ! ಇಲ್ಲಿ ಸಿಕ್ಕಿದ್ದಕ್ಕೆ ಏನೂ ಮೋಸವಾಡಲಾರ—ನನ್ನ ಮಾವ ಅವನು-ಹೆಣ್ಣು ಕೊಟ್ಟ ಮಾವ - ನಾನಿಷ್ಟು ಕೊಟ್ಟೆ ಅಂತ ಬರೆದಿದೇನೆ ಇದರಲ್ಲೇ...." ಅಂದ. ದಾಸರು ಮನಸ್ಸಿನಲ್ಲೇ ನಾಗರಾಜರಾಯರ ಕಾಲುಗಳೆರಡನ್ನೂ ಹಿಡಿದು ಕಣ್ಣಿಗೊತ್ತಿಕೊಂಡರು. "ಬುದ್ದಿ! ಹೊಸಕೆರೆ ಪಟೇಲ ಬೆಳಗಿನಜಾವಾನೇ ಎದ್ದು ಹೊಲದ ತಾವಿಗೆ ಹೊರಟ ಅಂದರೆ ಅಪ್ಪಯ್ಯ ಅಂದರೂ ಹಿಂದಕ್ಕೆ ಬಂದು ನಿಮ್ಮ ಗೋಳು ಕೇಳೋಕಿಲ್ಲ....ಅವನು ಹಟ್ಟಿಬಿಟ್ಟು ಹೊರಡುವುದಕ್ಕೆ ಮೊದಲು ಹಿಡೀಬೇಕು...ಕೋಳಿ ಕೂಗುವ ಹೊತ್ತಿಗೆ ಹೊರಟುಬಿಡಿ, ಕೆರೆ ಏರಿ ರಸ್ತೆ, ಮೇಷ್ಟ್ರಿಗೆ ಗೊತ್ತು, ಮೂರೇ ಮೈಲಿ" ಅಂತ ಹೇಳಿ ರಾಮೇಗೌಡ ದಾಸರನ್ನು ಬೀಳ್ಕೊಟ್ಟು ಅವರ ಆಶೀರ್ವಾದವನ್ನು ಪಡೆಕೊಂಡ.

ಕೋಳಿಗೆ ಮೊದಲೇ ಎದ್ದು ಗಂಟು ಸಹಿತವಾಗಿ ದಾಸರು ಕೆರೆ ಏರಿ ರಸ್ತೆಯ ಮೇಲೆ ಬಿರುಬಿರನೆ ಹೊರಟರು. ಹುಣಿಸೆ ಮರದ ಹತ್ತಿರ ಏನೋ ಸದ್ದಾಯಿತು. ಅನುಮಾನ ಬಲಿತು ಗಾಬರಿಗೇರಿತು. ಕಾಲಿಗೆ ವೇಗ ತಾನಾಗಿಯೇ ಕೂಡಿಬಂತು. ಹಿಂದೆ ಯಾರೋ ಬಂದಹಾಗೆ ಅನ್ನಿಸಿತು. ಇಬ್ಬರೂ ಮೂವರಿದ್ದಹಾಗೆ ತೋರಿತು. ದಾಸರು ಓಡಿದರು. ಹಿಂದಿನ ವ್ಯಕ್ತಿಗಳೂ ಓಡಿದುವು. ದಾಸರು ಅಯ್ಯೋ! ಅಂದರು. ಯಾರೋ ಬಂದು ಬಾಯನ್ನು ಅದುಮಿ ಹಿಡಿದರು. ಬೆನ್ನಮೇಲೆ ಬಲವಾದ ಏಟುಗಳು ಬಿದ್ದುವು. ತಲೆಬುರುಡೆಯ ಮೇಲೆ ದೊಣ್ಣೆ ತಗುಲಿದಾಗ ತಾರಾಮಂಡಲಗಳು ಕಾಣಿಸಿಕೊಂಡುವು. ದಾಸರು ಕುಂಟುತ್ತಾ ಕುಂಟುತ್ತಾ ದೊಡ್ಡರಸ್ತೆಗೆ ಬಂದು ಅಲ್ಲೇ ಮಲಗಿದ್ದು ಬಸ್ಸಿನಲ್ಲಿ ಬಿಟ್ಟ ಸೀಟ್ ಸಿಕ್ಕದೆ ಹೆಂಡದಲಾರಿ ಹತ್ತಿ ಊರು ಸೇರಿದರು.

ರಾಮೇಗೌಡರ ತಂತ್ರ ಫಲಿಸಿತು. ದಾಸರೇನೋ ಇನ್ನೂ ಗುದ್ದೂರನ್ನು ಹೊಗಳುತ್ತಿದಾರೆ. ಆದರೆ, ಅವರಿಗೆ ಬಿದ್ದ ಏಟುಗಳು ಪರೋಕ್ಷವಾಗಿ ನಾಗರಾಜರಾಯರಿಗೆ ತಗುಲಬೇಕಾದ್ದು ಎಂದು ಅವರಿಗೆ ತಿಳಿಯಲೇ ಇಲ್ಲ.

**ನೀತಿ**: ರಿಟೈರಾದ ಆಫೀಸರುಗಳಿಂದ ಕಾಗದ ತೆಗೆದುಕೊಂಡು ಹಳ್ಳಿಗಳಲ್ಲಿ ಸುತ್ತಬೇಡಿ.

—ಕೆ. ವಿ. ಸಾಂ.



" ನನ್ನ ತಲೆ ಮೇಲೆ ಕಲ್ಲು ಹಾಕೋ ಪ್ರಯತ್ನ ! ಇದೆಲ್ಲಾ ! "

# ಪರಭಾಷಾ ಪ್ರವೀಣ

ಕನ್ನಡವಲ್ಲದ ಭಾಷೆಯೊಂದನ್ನು ಕಲಿಯಬೇಕೆಂಬ ಆಸೆ ನನಗೆ ಈಗೀಗ 'ಬಯಕೆ'ಯಂತಾಗಿದೆ. ಅನ್ಯ ಭಾಷೆಯಲ್ಲಿ, ಸುಲಲಿತವಾಗಿ ತಪ್ಪುನೆಪ್ಪುಗಳಿಲ್ಲದೆ, ಮಾತನಾಡಬೇಕು. ಆ ಭಾಷೆಯನ್ನು ಮಾತನಾಡುವವರೂ ಕೂಡ, ಇವನು ನಮ್ಮವನೇ ಆದರೆ ಈ ರುಮಾಲು ನೋಡಿದರೆ ಮೈಸೂರು ಕನ್ನಡಿಗ ಇರಬೇಕು, ಎನ್ನುವಂತಾಗಬೇಕು. ಈ ಬಯಕೆಯು ತೀರ ಹೆಚ್ಚಾಯಿತು. ಕಡೆ ಕಡೆಗೆ ಹೊಟ್ಟೆಯನ್ನೆಲ್ಲಾ ಕಲಕಿ, ಹೊರಗೂ ಬರದು, ಸುಮ್ಮನೂ ಇರದು ಹೀಗಾಗಿ ಬಹಳ ಸಂಕಟಕ್ಕೇ ಶುರುವಾಯಿತು ಕಡೆಗೆ ಒಂದು ನಿರ್ಧಾರಕ್ಕೆ ಬಂದೆ. ಪಕ್ಕದ ನಾಡು, ತಮಿಳ ನಾಡು. ತಮಿಳನ್ನೂ ಕಲಿತುಬಿಡೋಣ ಎಂದು.

ನನಗೆ ಪರಿಚಿತರಲ್ಲಿ ಶೆಲ್ವಪಿಳ್ಳೈ ವಾದ್ಯಾರು ಅಚ್ಚ ತಮಿಳು ನಾಡಿನವರು. ಅವರನ್ನು ಹಿಡಿದು, ಅವರು ಸಲಹೆಯಂತೆ ಅವರ ಸಹಾಯ ದೊರೆತರೆ ತಮಿಳನ್ನು ಕಲಿಯುವುದು ಎಂದು ನಿಶ್ಚಯ ಮಾಡಿದೆ. ಅವರನ್ನು ಹೋಗಿ ಕಂಡೆ. ನನ್ನ ಹಂಬಲನ್ನು ಹೇಳಿಕೊಂಡೆ. ತಮಿಳು ಕಲಿಯುವುದು ಸುಲಭವೇ. ನೀವು ನನ್ನ ಭಾಷಾ ಗುರುಗಳಾಗುವಿರಾ. ಎಷ್ಟು ದಿನದಲ್ಲಿ ಪಾಂಡಿತ್ಯ ಹೊಂದಬಹುದು. ತಮಿಳಿನವರಂತೆಯೇ ಮಾತನಾಡಲು ಎಷ್ಟು ವಾರಗಳಾಗಬಹುದು. ಇದೇ ರೀತಿ ಇನ್ನು ಪ್ರಶ್ನೆಗಳನ್ನು ಕೇಳಿದೆ.

ಆತ ಸಾವಧಾನವಾಗಿ ಕೇಳಿದ. ನನ್ನ ಸ್ಥಿತಿಯನ್ನು ಕಂಡು ಮರುಗಿದ, ಕೊರಗಿದ ಅಯ್ಯೋ ಈ ಚಿಹ್ನೆಗಳೆಲ್ಲಾ ಈಗೀಗ ಸಾಂಕ್ರಾಮಿಕ ಜಾಡ್ಯದಂತೆ ಎಲ್ಲೆಲ್ಲೂ ಹರಡುತ್ತಿದೆ. ತಮಿಳು, ಹಿಂದಿ, ಮುಂದಿ, ಬಂಗಾಳಿ, ಕಂಗಾಳಿ, ಆಂಗ್ಲೇಯ, ಜಂಗ್ಲೀಯ, ಈ ರೀತಿ ಒಂದಲ್ಲ ಒಂದರ ಮೇಲೆ ಹುಚ್ಚು ಹಿಡಿಯುತ್ತದೆ. ನನ್ನ ಸ್ನೇಹಿತ, ಶ್ರೀರಾಮರಾಯ, ಕಡೇಮನೆ ಆಚೆಮನೆ ರಾಮರಾಯರು ಗೊತ್ತೇ. ಆತನ ವಿಚಾರ ನಿನಗೆ ಹೇಳುತ್ತೇನೆ. ಆತನಿಗೂ ನಿನ್ನಂತೆ ತಮಿಳ ಹುಚ್ಚು ಹಿಡಿಯಿತು. ಕಲಿತೇಬಿಡಬೇಕೆಂಬ ಚಟ ಹತ್ತಿತು. ಆತನಿಗಾದುದು ನಿನಗೆ ಗೊತ್ತೇ ಇದೆ. ಆದರೂ ಎಲ್ಲಾ ವಿಷಯಗಳೂ ತಿಳಿದಿರಲಾರದು ಹೇಳುತ್ತೇನೆ ಕೇಳು.

ರಾಮರಾಯರು ಕೆಲವು ವರ್ಷಗಳ ಹಿಂದೆ ತಮಿಳು ಕಲಿಯಬೇಕೆಂಬ ರೋಗಕ್ಕೆ ತುತ್ತಾದರು. ಇದೇ ಊರಿನ ಅರವಾ ಮುದ್ದೈಯ್ಯಂಗಾರ್ಯರ ಹತ್ತಿರ ಹೋಗಿ ತಮಿಳು ಹೇಳಿಕೊಡಿ ಎಂದು ಕೇಳಿದರು. ಆತನಾದರೋ ತಮಿಳು ದೇಶ ಬಿಟ್ಟು ಮೂರು ತಲೆ ಮೂರು ಆಗಿದ್ದಿತು. ಕನ್ನಡ ಸೀಮೆಯಲ್ಲಿ ಹುಟ್ಟಿ ಬೆಳೆದು, ಶಾಲೆಗಳಲ್ಲೆಲ್ಲಾ ಕನ್ನಡ ಕಲಿತು, ಮನೆಯಲ್ಲಿ ಕನ್ನಡ ಅಭ್ಯಾಸ ಮಾಡಿ, ಕಛೇರಿ ಕೆಲಸಗಳನ್ನೂ ಕನ್ನಡದಲ್ಲೇ ಮಾಡುತ್ತಿದ್ದನಾದಕಾರಣ, ಆತನಿಗೆ ತಮಿಳಿನ ಮಾತು ಒಂದೂ ಬಾರದು. ಇದನ್ನು ಕಂಡನಂತರ ನನ್ನಲ್ಲಿಗೆ ಬಂದ. ಬಂದು ತಮಿಳನ್ನೂ ಕಲಿತ. ಕಡೆಗೆ ನನಗಿಂತಲೂ ಚೆನ್ನಾಗಿ ಮಾತನಾಡಲೂ ಬಂತು. ತಮಿಳಿನವರ ಹಾವ ಭಾವ, ರೂಢಿಯ

ಮಾತುಗಳು ಎಲ್ಲವನ್ನೂ ಕಲಿತ. ಪರ ಭಾಷಾ ಪ್ರವೀಣನಾದ.

ಇದಾದ ಮೇಲೆ ತಾನು ಕಲಿತುದನ್ನು ಹೇಗೆ ಉಪಯೋಗ ಮಾಡುವುದು, ಎನ್ನುವ ಹೊತ್ತಿಗೆ, ನಮ್ಮೂರ ಭೀಮಯ್ಯಶೆಟ್ಟಿಯ ಪರಿಚಯವಾಯ್ತು. ಭೀಮಯ್ಯಶೆಟ್ಟಿಯು ಆಗ ಅಕ್ಕಿಮಂಡಿ ಇಟ್ಟಿದ್ದ. ಅಕ್ಕಿಯನ್ನು ಮೂಟೆಗಟ್ಟಲೆ, ತಮಿಳುನಾಡಿನಿಂದ ಕೊಂಡು ತಂದು, ಇಲ್ಲಿ ಮಾರಿ, ಜೀವನ ನಡೆಸುತ್ತಿದ್ದ. ಅವನಿಗೆ ತಮಿಳು ಬಾರದು, ಹೀಗಾಗಿ ಇವರುಗಳ ಪರಸ್ಪರ ಭೇಟಿಯಾದಾಗ ಇಬ್ಬರಿಗೂ ಒಂದೇ ಯೋಚನೆ ಹೊಳೆಯಿತು. ಈ ತಮಿಳು ಕಲಿತವನ ಸಹಾಯ ಪಡೆದರೆ ವ್ಯಾಪಾರಕ್ಕೆ ಅನುಕೂಲ ಎಂದು ಶೆಟ್ಟಿ ನಾನು ಕಲಿತದ್ದನ್ನು ಈಗ ಜೀವನೋಪಾಯಕ್ಕೆ ಉಪಯೋಗಿಸಬಹುದೆಂದು ರಾಮರಾಯ. ಸರಿ. ಇಬ್ಬರೂ ಒಂದು ರೀತಿಯಾಗಿ ಒಪ್ಪಂದಕ್ಕೆ ಬಂದರು. ಸುಗ್ಗಿಯ ಕಾಲವಾದ್ದರಿಂದ ಕೂಡಲೆ ರೈಲು ಹತ್ತಿ ತಮಿಳು ನಾಡಿನ, ತಂಡುಲ ದೇಶದ ಕೇಂದ್ರ ಒಂದಾದ ಗೋಬಿಚೆಟ್ಟಿಪಾಳ್ಯಕ್ಕೆ ಹೊರಟರು.

ಗೋಬಿಚೆಟ್ಟಿ ಪಾಳ್ಯದಲ್ಲಿ ರಾಮರಾಯನಿಗೆ ಭಾಷೆಯ ಸುಗ್ಗಿ. ಭೀಮಯ್ಯಶೆಟ್ಟಿಗೆ ಅಕ್ಕಿಯ ಸುಗ್ಗಿ. ಇಬ್ಬರೂ ವ್ಯಾಪಾರಕ್ಕೆ, ಗದ್ದೆಗೇ ಹೋದರು. ಗದ್ದೆಯ ಮೇಲೇ ಫಸಲನ್ನೂ ಕೊಂಡರೆ ಹಣ ಉಳಿತಾಯವಾಗುತ್ತೆಂದು, ಹಾಗೆ ತೀರ್ಮಾನಿಸಿದರು. ಸರಿ ಊರು ಬಿಟ್ಟು ಭತ್ತದ ಗದ್ದೆಗೆ ಹೋದರು. ಅಲ್ಲಿ ಗದ್ದೆಯ ಯಜಮಾನನು ಸಾಕ್ಷಾತ್ತಾಗಿ ನಿಂತಿದ್ದ. ಶೆಟ್ಟರಂದರು ರಾಮರಾಯರೇ ಕೇಳಿ. ಈ ನಾಲ್ಕು ಎಕರೆಯ ಫಸಲೆಲ್ಲಾ ಇಲ್ಲಿಯೇ ಮಾರಿದರೆ ಎಷ್ಟು ಹಣ ಬೇಕು ಎಂದು.

ರಾಮರಾಯರು ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ, ವ್ಯಾಪಾರಕ್ಕೂ ಹಾಗೆಯೇ, ತೊಡಗಿದರು. ಉಟ್ಟಿದ್ದ ದಟ್ಟಿ ಪಂಚೆಯನ್ನು ಕಾಲಿಂದ ತೊಡೆಯವರೆಗೆ ಮೇಲಕ್ಕೆತ್ತಿ ಕಟ್ಟಿದರು. ಹೊದ್ದಿದ್ದ ಶಲ್ಯವನ್ನು ತಲೆಗೆ ಸುತ್ತಿದರು. ವೀಳೆಯದೆಲೆ ಹೊಗೆಯಸೊಪ್ಪನ್ನು ಬಾಯಿಯ ದವಡೆಯಲ್ಲಿ ಒತ್ತರಿಸಿಟ್ಟರು. ಗದ್ದೆಯ ಮಾಲೀಕನ ಪ್ರತಿಬಿಂಬದಂತೆ ಕಂಡರು. ಒಂದೇ ಸಮನೆ ಬಾಯಿ ಮುಕ್ಕಳಿಸುವರಂತೆ ಗಳಗಳಿಸಿದರು ಒಂದು ನಿಮಿಷ. ಗದ್ದೆಯವನು ಅದೇ ರೀತಿ ಪ್ರತಿಧ್ವನಿ ಗೈದನು, ಆದರೆ ಎರಡು ನಿಮಿಷ. ಈ ಸೋಜಿಗವನ್ನು ನೋಡಿದ ಶೆಟ್ಟಿಗೆ ಓಹೋ ರಾಮರಾಯರು ಗೆದ್ದಿರಬೇಕು. ಬಹಳ ಸುಲಭವಾಗಿ ಕೊಂಡಿರಬೇಕು ಎಂದುಕೊಂಡು ಏನು ರಾಮರಾಯರೆ ಎಷ್ಟಕ್ಕೆ ಒಪ್ಪಿಕೊಂಡರು ಎಂದರು. ಇನ್ನೂ ಅವರ ಮಾತಿಗೆ ಬಂದಿಲ್ಲ. ಪರಸ್ಪರವಾಗಿ ಪರಿಚಯ ಮಾಡಿಕೊಳ್ಳುತ್ತಿದ್ದೇವೆ. ಸ್ವಲ್ಪದರಲ್ಲೇ ವ್ಯಾಪಾರಕ್ಕೆ ಶುರು ಮಾಡುತ್ತೇನೆ ಎಂದರು.

ಕಂಚಿನ ಪಾತ್ರೆಗೆ ಕಲ್ಲು ಹಾಕಿ ಆಡಿಸಿದಂತೆ ತಿರುಗಿ ರಾಗವಾಗಿ ರಾಮರಾಯರು ವಳವಳಿಸಿದರು ಎರಡು ನಿಮಿಷ. ಗದ್ದೆಯವನು ಇದೇ ರಾಗದಲ್ಲಿ ಇನ್ನೊಂದು ಸಂಗತಿಯನ್ನು ಇನ್ನೂ ಮೂರು ನಿಮಿಷ ವಳವಳಿಸಿದ. ಸ್ವಲ್ಪ ಸುಸ್ತಾದವನಂತೆ, ಸುಧಾರಿಸಿಕೊಂಡ—ಒಡೆದ ಕಂಚಿನ ಪಾತ್ರೆ ಶಬ್ದ ನಿಂತಂತಾಯ್ತು.

ಈಗೇನಯ್ಯಾ ಮಾತನಾಡಿದೆ. ಎಷ್ಟಕ್ಕೆ ಮಾರುತ್ತಾನೆ ಎಂದು ಶೆಟ್ಟಿ ಕೇಳಿದ.

ಇನ್ನೂ ಆ ಮಾತಿಗೆ ಬಂದಿಲ್ಲ. ಪರಸ್ಪರ ಕ್ಷೇಮ ಸಮಾಚಾರ ಕೇಳುತ್ತಿದ್ದೇವೆ ಎಂದರು ರಾಮರಾಯರು.

ಬೇಗ ಕೇಳಯ್ಯಾ ಇಲ್ಲೇ ನಿಂತು ಈ ಮಾತು ಎಷ್ಟು ಹೊತ್ತು ಆಡುವುದು ಎಂದು ಶೆಟ್ಟಿಯು ಅವಸರಿಸಿದ.

ಈ ಸಾರಿ ಯಾವ ರಾಗದಲ್ಲಿ ಶುರು ಮಾಡಿದರೊ ಗೊತ್ತಾಗಲಿಲ್ಲ. ಆದರೆ ರಜೋ ರಾಗ ಇದ್ದಿರಬೇಕು. ರಾಮರಾಯನ ಶಲ್ಯದ ಬಾಲಂಗೋಚಿ ಹಾರಾಡುತ್ತಿತ್ತು. ಅದಕ್ಕೂ ಮಿಗಿಲಾಗಿ ಗದ್ದೆಯವನ ರಾಗಟೆ ಜಡೆಯು ಕುಣಿದಾಡುತ್ತಿತ್ತು. ಇಬ್ಬರೂ ಒಟ್ಟಿಗೇ ರಜೋರಾಗಾಲಾಪನೆ ಮಾಡಿದಂತಾಯ್ತು. ಕೆಲವು ವೇಳೆ ಮರವನ್ನು ಗರಗಸದಿಂದ, ಮೊಂಡು ಗರಗಸದಿಂದ ಕೊಯ್ದಂತಾಗುತ್ತಿತ್ತು. ಮರದ ಹೊಟ್ಟಿನ ಬದಲು ಇವರುಗಳ ಉಗುಳು ತುಂತುರ ಮಳೆ ಬಂದಂತೆ ಬೀಳುತ್ತಿತ್ತು. ಇದು ಐದು ನಿಮಿಷ ಸಾಗಿತು. ಓಹೋ ವ್ಯಾಪಾರವು ಮುಗಿದೇ ಇರಬೇಕು ಎಂದುಕೊಂಡ ಶೆಟ್ಟಿ. ಕೇಳಿದ ರಾಮರಾಯರನ್ನು ಮುಗಿಯಿತೇ ಎಂದು ರಾಮರಾಯರಂದರು. ನಮ್ಮೂರ ಕಡೆ ಫಸಲು ಬೆಳೆ ಹೇಗಿದೆ ಎಂದು ಕೇಳುತ್ತಿದ್ದ. ನಾನು ಅವನನ್ನು ಅದೇ ದಾಟಿಯಲ್ಲಿ ಕೇಳಿದೆ. ಇನ್ನೇನು ವ್ಯಾಪಾರಕ್ಕೆ ಶುರುವಾಗುವ ವೇಳೆ ಬಂತು ಎಂದು ಧೈರ್ಯ ಕೊಟ್ಟರು.

ಸರಿ. ಈ ಸಾರಿ, ಜೋರಾಗಿ ಮಳೆ ಬಂದು, ತಗಡಿನ ಸೂರಿನ ಮನೆಯಲ್ಲಿದ್ದರೆ, ಸೂರು ಸೋರುತ್ತಿದ್ದರೆ ಹೇಗೆ ಶಬ್ದ ಆಗುತ್ತೋ ಹಾಗೆ ರಾಮರಾಯರು ಪ್ರಾರಂಭಿಸಿದರು. ಒಂದೇ ಸಮನೆ ಮುಂಗಾರು ಮಳೆ ಹೊಡೆದಂತೆ ವಾಕ್ಪ್ರವಾಹ ಹೊರಡಿಸಿದರು, ಗಂಟಲು ಕಟ್ಟಿ ಕಿತ್ತುಕೊಂಡಂತೆ ಕೊಚ್ಚಿದರು. ಎದುರಾಳಿಯು ತಮಿಳಿಗನಲ್ಲವೇ. ಕಾವೇರಿ ಪ್ರವಾಹವು ಛಲಚುಕ್ಕಿಯಲ್ಲಿ ಬಿದ್ದಂತೆ ಮಾತನಾಡಿದನು. ಅಡವಿಯಲ್ಲಿ ಅಡಅಡ ಎಂಬ ಗುಡುಗಿನ ನಾದವು ಬಂದಂತಾಯಿತು. ಅಯ್ಯೋ ಪುಣ್ಯಾತ್ಮ ಹೀಗೆ ಮಾತನಾಡಿದರೆ ಹಲ್ಲು ನಾಲಿಗೆಗೆ ತಗುಲಿ, ಅನ್ಯಾಯವಾಗಿ ಅಪಘಾತವಾಗುತ್ತಲ್ಲಾ. ಅನ್ಯಾಯವಾಗಿ ಪಾಪಿ ಹಲ್ಲು ಮುರಿದುಕೊಳ್ಳುತ್ತಾನಲ್ಲಾ ಎನ್ನುತ್ತಿದ್ದ ಶೆಟ್ಟಿ ಮೆಲ್ಲಗೆ ರಾಮರಾಯರನ್ನು ಕೇಳಿದ ಎಲ್ಲಿನ ತನಕ ಬಂತು ಎಂದು. ಗೋಬಿ ಚೆಟ್ಟಿಪಾಳ್ಯದ ಭತ್ತದ ಗುಣಾವಗುಣಗಳನ್ನು ಹೊಗಳುತ್ತಿದ್ದಾನೆ ಎಂದರು ರಾಮರಾಯರು.

ಓಹೋ ಎಂದ ಶೆಟ್ಟಿ ನಿಸ್ತೇಜನಾದ. ಸುಸ್ತಾದ. ಭೀಮಕಾಯ ಅವನದು. ಭೀಮನ ಹಸಿವಿನಂತೆಯೇ ಆತನ ವ್ಯಾಪಾರದ ಹಸಿವು. ಈ ಮಾತಿನ ಚತುರತೆ, ವಿಳಂಬಕ್ಕೆ ಅವನ ಮನಸ್ಸು ಒಡಂಬಡದು. ದೇಹಶಕ್ತಿ ಚೆನ್ನಾಗಿತ್ತು. ಭೀಮಯ್ಯ ಶೆಟ್ಟಿಯು ಕತೆಯನ್ನು ಈ ರೀತಿ ಮುಂದುವರಿಸಿದ. ನಾವೆಲ್ಲರೂ ಈ ಮಾತನಾಡುತ್ತಿದ್ದಾಗ ಪಕ್ಕದಲ್ಲೇ ದೊಡ್ಡ ಕಂದಕ ಒಂದಿತ್ತು. ಇವರಿಬ್ಬರೂ ಮಾತನಾಡುತ್ತ ಕಂದಕದ ಇರುವಿಕೆಯನ್ನೇ ಮರೆತಿದ್ದರು. ನಾನು ಬೇಜಾರಿನಿಂದ ಮೈಮುರಿಯಲು ಕೈಗಳನ್ನೆತ್ತಿದೆ. ಹೀಗೆ ನೋಡಿ ಹಾಗೆ ಕಣ್ಣು ಬಿಡುವಲ್ಲಿ ಇಬ್ಬರೂ ಮಾಯವಾಗಿದ್ದರು. ಕಂದಕದಲ್ಲಿ ಗಳಗಳ, ಅಡತಡ,

ಅಯ್ಯೋಯ್ಯೋ ಶಬ್ದಗಳಾಗುತ್ತಿತ್ತು. ಓಹೋ ಇಬ್ಬರೂ ಕಂದಕದಲ್ಲಿ, ನೀರು ತುಂಬಿದ ಕಂದಕದಲ್ಲಿ ಇನ್ನೂ ವ್ಯಾಪಾರ ಮಾಡುತ್ತಿದ್ದಾರೆ ಎಂದುಕೊಂಡೆ. ಇನ್ನು ನನಗೇನು ಕೆಲಸ ಎಂದುಕೊಂಡು ಹಿಂತಿರುಗಿದೆ. ರಾಮರಾಯರ ಮನೆಯವರಿಗೆ, ಆತನು ಇನ್ನೂ ತಮಿಳಿನಲ್ಲಿ ವ್ಯಾಪಾರ ಮಾಡುತ್ತಿದ್ದಾನೆ ಎಂದು ವರದಿಮಾಡಿದೆ.

*   *   *

ನೋಡಯ್ಯಾ ತಮಿಳು ಕಲಿತವನ ಗತಿ ಹೀಗಾಯಿತು. ನಿನಗೆ ಇನ್ನೂ ಚಪಲ ಇದೆಯೇ ಎಂದರು ಶೆಟ್ಟಿ ಪಿಳ್ಳೈವಾದ್ಯರು. ಈ ದುರ್ಮರಣದ ತಮಿಳು ಕತೆಯನ್ನು ಕೇಳಿದ ನನಗೆ ಜಾಡ್ಯವು ಹರಿದಂತಾಗಿತ್ತು. ಬೇಡಪ್ಪಾ ಬೇಡಪ್ಪಾ ಈ ಸಜೀವ ತಮಿಳಿನ ಭ್ರಾಂತಿ ಹೋಗಿ ಬಿಟ್ಟಿದೆ. ಶಾಂತಿಸ್ವರೂಪದ, ಸಂಸ್ಕೃತವನ್ನೇ ಅಭ್ಯಾಸ ಮಾಡುತ್ತೇನೆ. ನಮ್ಮಜ್ಜನಿಗೆ ಸಂಸ್ಕೃತ ಚೆನ್ನಾಗಿ ಗೊತ್ತು. ಆತನಿಗೆ ಶಕ್ತಿಯೂ ಕುಂದಿದೆ. ಅಪಾಯವಿಲ್ಲದೆ ಆತನ ಹತ್ತಿರ ನಿರಸ್ತ್ರವಾದ ಈ ಸಂಸ್ಕೃತವನ್ನೇ ಕಲಿಯುತ್ತೇನೆ ಎಂದು ಹೇಳಿದೆ.

ಈಗ ಸಂಸ್ಕೃತವನ್ನು ಕಲಿಯುತ್ತಿದ್ದೇನೆ. ತಕ್ಕಮಟ್ಟಿಗೆ ಅಮರಕೋಶವೂ ಬರುತ್ತೆ.

ಅದರ ವ್ಯಾಸಂಗವಾದ ಮೇಲೆ ಅದರ ತಿರುಳನ್ನು ತಿಳಿಗನ್ನಡದಲ್ಲಿ ನಿಮಗೆ ಒದಗಿಸುತ್ತೇನೆ, ಹುಷಾರ್.









# ನನ್ನ ಲಗ್ನ ಪತ್ರಿಕೆ

ಲಾಲ್‌ಬಾಗಿನಲ್ಲಿ ಆ ಹುಡುಗಿ ಸಂಗಡ 'ಕಳ್ಳ ಪೋಲೀಸ್' ಆಡಿ, ಅವಳ ಹೆಸರು ಕಲ್ಯಾಣಿ ಅಂತ ಪತ್ತೆ ಮಾಡಿಕೊಂಡು, ನಿಧಾನವಾಗಿ ನನ್ನ ರೂಮಿಗೆ ಬಂದೆ. ರಾತ್ರಿ ಊಟವೇ ಬೇಡವೆನ್ನಿಸಿತು. ಹೊಟ್ಟೆಯಲ್ಲೇನೋ ಒಂದು ರೀತಿಯ ತಳಮಳ; ಮನಸ್ಸಿನಲ್ಲಿ ಯಾವುದೋ ಕಳವಳ. ಮೂರು ನಾಲ್ಕು ದಿನಗಳ ತನಕ ಹಸಿವಾಗದು ಎಂಬಷ್ಟು ಅನ್ನಿಸಿತು. ಒಂಭತ್ತು ಗಂಟೆಗೇ ಮಲಗಿದೆ; ನಿದ್ದೆಯೂ ಬಂತು. ಆದರೆ, ಒಳಗಿನ ಬೋಂಡಗಳಿಗೂ ಶಾವಿಗೆ ಪಾಯಸಕ್ಕೂ ಸ್ನೇಹಬಾಂಧವ್ಯಗಳು ಸಾಲದೆ ಅಂತಃ ಚಕ್ಷುವಿಗೆ ಭಯಂಕರ ದೃಶ್ಯಗಳು ಕಾಣಿಸಿದುವು.

ಕನಸಿನಲ್ಲಿ ಲಾಲ್‌ಬಾಗ್. ಕಲ್ಯಾಣಿ ಕಾಣಿಸಿಕೊಂಡಳು. ಅದೇ ಕಣ್ಣುಗಳು; ಅವೇ ಮಾನಸಸರೋವರಗಳು. ಆದರೆ, ಕ್ಷಿಪ್ರದಲ್ಲೇ ಮಾಯವಾಗಿ, ಅವಳು ನಿಂತ ಕಡೆ ಹಲ್ಲು ಬಿದ್ದ ಮುದುಕಿ ಪ್ರತ್ಯಕ್ಷವಾದಳು. ಆಕೆಯ ಸರಸಲ್ಲಾಪದಿಂದ ಸಂಕಟ ಪಡುತ್ತಿದ್ದ ನನಗೆ ಇದ್ದಕ್ಕಿದ್ದ ಹಾಗೆ ಹೆದರಿಕೆ ಹತ್ತಿತು. ದೊಡ್ಡದೊಂದು ಬೋಗುಣಿ ಸಹಿತವಾಗಿ ಮುದುಕಿ ನನ್ನ ಮೇಲೆ ಧಾಳಿಗಾರಂಭಿಸಿದ್ದಳು! ನಮ್ಮ ಜಗಳವನ್ನು ನೋಡಲು ಕುತೂಹಲರಾಗಿ ನೂರಾರು ಜನರು ಗುಂಪು ಕೂಡಿದರು. ನಾನು ಅನಿರ್ದಿಷ್ಟವಾದ ರಕ್ಷಣಾ ಸಾಲಿಗೆ ಜಿಮ್ಮೆಟ್ಟಿದೆ. ಓಟದ ಭರಾಟೆಯಲ್ಲಿ ಎದುರಿಗಿದ್ದವರ ಅರಿವೇ ಇರಲಿಲ್ಲ. ನೆಟ್ಟಗೆ ಹೋಗಿ ನನ್ನ ಕಾಲೇಜು ಪ್ರೊಫೆಸರ್‌ರವರ ಹೊಟ್ಟೆಗೇ ಢಿಕ್ಕಿ ಹೊಡೆದೆ. ಅವರು ನನ್ನನ್ನು ಹಿಡಿದು ಜಗ್ಗಿಸಿ, "ಲೋ! ಗುಪ್ತರ ಕಾಲದಲ್ಲಿ ಇಂಡಿಯಾ ದೇಶದ ಚರಿತ್ರೆಯಲ್ಲಿ ನಡೆದ ಮುಖ್ಯ ಮುಖ್ಯ ಸಂಗತಿಗಳೇನು? ಬೊಗಳು" ಅಂದರು. ಅವರ ಕೇಳಿಕೆಗೆ ಏನು ಹೇಳಿಕೆ ಕೊಡೋಣ ಅಂತ ತಲೆ ಕೆರೆಯುವ ಹೊತ್ತಿಗೆ ಮುದುಕಿ (ಕಲ್ಯಾಣಿಯ ವದನಾರವಿಂದ ಬಾಡಿದ ಹಾಗೆಯೇ ಇತ್ತು ಅವಳ ಮುಖ) ಬೋಗುಣಿ ಸಹಿತವಾಗಿ ಅಲ್ಲಿಗೆ ಅರ್ಭಟಿಸುತ್ತಾ ಬಂದಳು. ದೇವರ ದಯೆಯಿಂದ ಪ್ರೊಫೆಸರ್‌ರವರು ನನ್ನ ಪಕ್ಷವಹಿಸಿದರು. "ಹೇ! ಹೋಗು ದೂರ! ಹುಡುಗನನ್ನು ಪೀಡಿಸಬೇಡ" ಅಂದರು. ಆಗ, ಮುದುಕಿ ಬೋಗುಣಿಯಲ್ಲಿದ್ದ ಕಲಗಚ್ಚನ್ನು, ಸದ್ಯಃ, ಅವರ ತಲೆ ಮೇಲೆ ಸುರಿದಳು. ನಾವಿಬ್ಬರೂ ಓಡಿದೆವು. ಅಷ್ಟು ಹೊತ್ತಿಗೆ ನಾವಿಬ್ಬರೂ ಹೇಗೋ ಒಂದು ಕೊಠಡಿಯೊಳಗೆ ಸೇರಿಕೊಂಡುವು. ಮುದುಕಿ ಹೊರಗಿಂದ ಬಾಗಿಲು ಬಡಿದು ಕೂಗಾಡುತ್ತಿದ್ದಳು. ಗುಂಪು ಕೂಡಿದ್ದ ಜನರೂ ಕೂಡ, "ಬಡಿ! ಬಡಿ!" ಎಂದು ಆಕೆಯನ್ನು ಹುರಿದುಂಬಿಸುತ್ತಿದ್ದರು. ಅಷ್ಟರಲ್ಲೇ ಆಕೆ ಹೊರಗೆ ನಿಂದ "ಎಷ್ಟು ದಿನ ಒಳಗೆ ಹೊಟ್ಟೆಗಿಲ್ಲದೆ ಸೇರಿರುತ್ತೀರೋ, ನೋಡುತ್ತೇನೆ" ಅಂತ ಕಿರಿಚುತ್ತಾ, ಅಲ್ಲೇ ಕುಳಿತು, "ಎನ್ನಾಡು ವಯೆ ಪತ್ಸುನೋ?" ಎಂಬ ಕೀರ್ತನೆಯನ್ನು ಹಾಡಿದಳು.

ಈ ಸೋಜಿಗವನ್ನು ನನ್ನ ಸಹವಾಸಿಯಾದ ಮೇಷ್ಟರಿಗೆ ಹೇಳೋಣ ಅಂತ ತಿರುಗಿದರೆ, ....ಅಯ್ಯೋ! ನನ್ನ ಹತ್ತಿರ ನಿಂತಿದ್ದು ಮುದುಕಿ! ಮೇಷ್ಟರಲ್ಲ! ಸರಿ!

ಬಾಗಿಲಿನ ಚಿಲಕ ತೆಗೆದು ಹಾರಿದೆ ಹೊರಕ್ಕೆ! ಓಡಿದೆ! ಗವಿಗಂಗಾಧರೇಶ್ವರ ದೇವಾಸ್ಥಾನದ ಗೋಪುರ ಹತ್ತಿದೆ! ಅಲ್ಲೊಂದು ಹುಲಿ! ಆಯಿತಲ್ಲ? ಗತಿ!

ಆಗಿನ ಬೆವರಿಗೂ ನಡುಕಕ್ಕೂ, ಎಚ್ಚರವೇ ಆಗಿಹೋಯ್ತು.... ವಾಚಕ ಮಹಾಶಯರೇ! ಮಿತಭೋಜನವೇ ಸುಖ. ಹೆಚ್ಚಾಯಿತು ಅಂದರೆ ಸರಿ! ಹಲ್ಲಿಲ್ಲದ ಮುದುಕಿಯೊಡನೆ ಕಾಳಗ; ಗೋಪುರದ ತುತ್ತತುದಿಯಲ್ಲಿ ಘೋರ ವ್ಯಾಘ್ರದರ್ಶನ!—ಇವೇ ನಮಗೆ ಸಿಗುವ ಫಲ.

ಅಂತೂ ಇಂತೂ, ಬೆಳಗಾಯಿತು. ಭಾನುವಾರ! ತಂದೆಯವರಿಂದ ಕಾಗದ: "ಬೆಂಗಳೂರಲ್ಲೇ ಲಗ್ನಪತ್ರಿಕೆ ಪ್ರಿಂಟ್ ಮಾಡಿಸಿ ತೆಗೆದುಕೊಂಡು ಬಾ! ಉದಯಾತ್ಪರ ಹತ್ತು ಗಳಿಗೆ, ಕರ್ಕಾಟಕ ಲಗ್ನ, ಜೂನ್ ೨ನೇ ತಾ||, ರಂಗಣ್ಣನವರ ಸ್ವಗೃಹೆ, ಚಿ|| ಸೌ|| ಹ|| ಕುಂ|| ಶೋ|| ಕಲ್ಯಾಣಿ" ಇಷ್ಟೇ ಅದರ ಒಕ್ಕಣೆ!

ಆಹ್ವಾನ ಪತ್ರಿಕೆಗೆ ನಮ್ಮ ತಂದೆಯ ರುಜು ಇಲ್ಲ. ಅವರ ಹಿರಿಯ ಅಣ್ಣಂದಿರು ಶೇಷಪ್ಪನವರ ಹೆಸರಲ್ಲಿ ಎಲ್ಲರನ್ನೂ ಕರೆಯಬೇಕೆಂಬುದು ಅವರ ಅಭಿಮತ ; ಅಭಿಮತವೇನು? ಅವರಿಗೆ ಒದಗಿದ ಅನಾಹುತ. ನಮ್ಮ ತಂದೆಯವರು ಎಣ್ಣೆ ಆದರೆ ಅವರ ಅಣ್ಣಂದಿರು ಶೀಗೆಕಾಯಿ! ಕಳೆದ ಕಾಲು ಶತಮಾನದಿಂದಲೂ ಅವರಿಬ್ಬರಿಗೂ ಕೋರ್ಟು ಕಚೇರಿಗಳಲ್ಲೇ ಭೇಟಿ. ಒಬ್ಬರ ಮೇಲೊಬ್ಬರು ಹತ್ತಾರು ಸಿವಿಲ್ ಕೇಸುಗಳನ್ನೂ ನಾಲ್ಕೈದು ಕ್ರಿಮಿನಲ್ ಕೇಸುಗಳನ್ನೂ ಹೇರಿ ಹೋರಾಡುತ್ತಿದ್ದರು. ಕಳೆದ ಐದು ವರ್ಷಗಳಿಂದ ಅವರಿಬ್ಬರಿಗೂ ಒಂದು ರೀತಿಯ ಸಶಸ್ತ್ರ ಶಾಂತಿ ಏರ್ಪಟ್ಟಿದೆ. ದೊಡ್ಡಪ್ಪನವರ ಕೈಯಲ್ಲಿರುವ ಶಸ್ತ್ರವೆಂದರೆ ಒಂದು ಡಿಕ್ರಿ! ಅದನ್ನು ಯಾವತ್ತು ತೋರಿದರೂ ಅವರು ಜಾರಿ ಮಾಡಬಹುದಾಗಿದೆ. ಆದರೂ, ವಿವಾಹ ಮಹೋತ್ಸವ ಲಗ್ನಪತ್ರಿಕೆಗೆ ಆತನ ರುಜು ಬೀಳಬೇಕು! ಹೇಗಿದೆ? ಕೋರ್ಟಿನಲ್ಲಿ ನಾನು ನನ್ನ ಪರಮವೈರಿಯಾದ ಎದುರುಪಕ್ಷದ ಮುಟ್ಠಾಳ ವಕೀಲರನ್ನು "ಮೈ ಲರ್ನೆಡ್ ಫ್ರೆಂಡ್" ಎಂದು ಸಂಭೋಧಿಸುವ ಹಾಗೆ! "ರಾಮಂ ದಶರಥಂ ವಿದ್ಧಿ" ಎಂಬುದು ರಾಮನ ಕಾಲಕ್ಕೇ ಮುಕ್ತಾಯ. ಆದರೂ, ಬೂಟಾಟಿಕೆಗೆ ಮಾತ್ರ ಈ ಬಾಹ್ಯಾಡಂಬರಗಳನ್ನು ಇನ್ನೂ ನಾವು ಉಳಿಸಿಕೊಂಡಿದ್ದೇವೆ!

ಲಗ್ನ ಪತ್ರಿಕೆ ಬರೆಯುವುದು ಅಂದರೆ ಸಾಮಾನ್ಯರಿಂದ ಸಾಧ್ಯವಿಲ್ಲ. ವಧೂವರರ ಹೆಸರುಗಳನ್ನೂ ಲಗ್ನದ ಮುಹೂರ್ತವನ್ನೂ ಕೃತ್ಯ ನಡೆಯುವ ಸ್ಥಳವನ್ನೂ ಸೂಚಿಸಿದರೆ ಸಾಲದು. ಅದಕ್ಕೆ ಮೊದಲು ಉಭಯ ಕುಶಲೋಪರಿ ಸಾಂಪ್ರತಗಳಾಗಬೇಕು. ದ್ವೈತಾದ್ವೈತ ವಿಶಿಷ್ಟಾದ್ವೈತಾದಿ ಸಂಪ್ರದಾಯಭೇದಗಳನ್ನನುಸರಿಸಿ ಪೀಠಿಕೆಯಲ್ಲೂ ಭೇದಗಳಿವೆ. ಕೆಲವರನ್ನು ಹರಿವಾಯುಗಳು ಪ್ರೇರೇಪಿಸಿದರೆ, ಕೆಲವರಿಗೆ ಕೇವಲ ಗುರುಹಿರಿಯರೇ ಶರಣು. ಆದಿತ್ಯಾದಿ ಗ್ರಹಗಳ ಅಪ್ಪಣೆಯಿಲ್ಲದೆ ಕೆಲವರು ಚಪ್ಪರ ಹಾಕುವುದೇ ಇಲ್ಲ. ನಾವು ಆಹ್ವಾನಿಸುವ ಭೂಪತಿಗಳನ್ನು ಅತಿಯಾಗಿ ಸ್ತೋತ್ರ ಮಾಡುವುದು ಬೇರೆ.

ಚೈನಾ ದೇಶದಲ್ಲಿ ಇಂತಹ ವಿನಯಾಭಾಸಗಳು ಹೆಚ್ಚು ಅಂತ ಕೇಳಿದ್ದೇನೆ. ನಿಜವೋ ಸುಳ್ಳೋ ಎಂಬುದು ನನಗೆ ಹೇಳಿದವನಿಗೇ ಗೊತ್ತಿಲ್ಲ. ಅಲ್ಲಿ, "ಮಾರುತಕೆ ನವಿಲಿನ ಸಾವಿರ ಗರಿ ಶಿರೋಭಾರದ ಪ್ರಭುಗಳೇ! ನಿಮ್ಮ ಹಿರಿಯರನ್ನು ಹೊತಿಟ್ಟ

ಜಾಗದಲ್ಲಿ ಮಾದಳ ಗಿಡಗಳು ಬೆಳೆದು ರುಚಿರುಚಿಯಾದ ಹಣ್ಣುಗಳನ್ನೀಯಲಿ! ನಿಮ್ಮ ಅಡಿಗೆಮನೆ ಸೌಟುಗಳು ಸದಾ ಪಾಯಸದಲ್ಲೇ ಓಲಾಡಲಿ! ನಿಮ್ಮ ಮನೆ ನಾಯಿಮರಿಗೆ ಕಜ್ಜಿ ಬರದಿರಲಿ! ಇಲ್ಲೇ ಹತ್ತಿರ ಎಲ್ಲಾದರೂ ಚಹದಂಗಡಿ ಇದ್ದರೆ ತೋರಿಸೋಣ ವಾಗುತ್ತದೆಯೇ ? '' ಅಂತ ಕೇಳುವರಂತೆ.

ಶಮದಮಾದಿ ಷಟ್ಸಂಪತ್ತುಗಳನ್ನುಳ್ಳಂತಹ ಉಭಯವೇದಾಂತ ಪರಿಜ್ಞಾನವನ್ನು ಸಂಪೂರ್ಣವಾಗಿ ಪಡೆದಿರುವ ತಮ್ಮ ದಾಸಾನುದಾಸನು ಉದ್ದಕ್ಕೂ ಅಡ್ಡಬಿದ್ದು, ಬರೆ ಯುವುದೇನೆಂದರೆ, ಆದೌ, ಇದುವರೆಗೂ, ನಿಮ್ಮ ದಶವರ್ಗದವರೂ ನಿರುಪಾಧಿತರಾಗಿ ಕಾಲ ತಳ್ಳುತ್ತಿದ್ದಾರೆ, ಇತ್ಯಾದಿ ಬರೆದು....ಲಗ್ನದ ಪ್ರಸ್ತಾಪ ಮಾಡುತ್ತಾರೆ.

ಇದನ್ನೆಲ್ಲಾ ಬರೀ ಪೋಸ, ಪೊಳ್ಳು, ಅಂತ ನಾವು ತಳ್ಳುವ ಹಾಗಿಲ್ಲ. ದಯ ಮಾಡಿ, ಅಪ್ಪಣೆ, ಕೊರೋಣವಾಗಲಿ, ಶ್ರುತವಾಯಿತೆ, ಮುಂತಾದ ಗೌರವಸೂಚಕ ಪದಗಳಿಲ್ಲದಿದ್ದರೆ ಮಾನವ ಸಮಾಜದಲ್ಲಿ ಮನಸ್ತಾಪಗಳು ಇನ್ನೂ ನೂರ್ಮಡಿಯಾಗಿ ಹೆಚ್ಚುವುವು. ಆದ್ದರಿಂದ ಆಗಿನ ಕಾಲದಲ್ಲಿ ನನ್ನ ಲಗ್ನ ಪತ್ರಿಕೆಯನ್ನು ನಾನೇ ಬರೆ ದಾಗ ನನಗೆ ತುಂಬಾ ಕಷ್ಟಕ್ಕಿಟ್ಟುಕೊಂಡಿತು.

*    *    *    *

ಈಗ ಅಂಥಾದ್ದೇನೂ ಇಲ್ಲ. ಮೊನ್ನೆ ನನ್ನ ಮಗನಿಗೆ ಅವನ ಸ್ನೇಹಿತ ಕಾಗದ ಬರೆದಿದ್ದ: "ಲೋ! ಕೆಪ್ಪ! ನಾಳೆ ತಿಮ್ಮಣ್ಣನ ಛತ್ರಕ್ಕೆ ನುಗ್ಗು! ನಾನೂ ಇನ್ನೊಬ್ಬಳೂ ಕಪಿಗಳ ಹಾಗೆ ಕತ್ತಿಗೆ ಹಾರ ಬಿಗಿದುಕೊಂಡು ಕೆಂಚಗೆ ಕೂತಿರುತ್ತೇವೆ. ಅಲ್ಲೇ ಕೊಂಚ ಹೊತ್ತು ಕುಕ್ಕರ ಬಡಿದರೆ, ನಿನ್ನ ಹಾಳು ಹೊಟ್ಟೆಗೆ ಮುಂಡಿಗೇನೂ ಅಂಬೊ ಡೇನೂ ಭರ್ತಿ! ಏನಮ್ಮಾ! ಊ, ಅನ್ನು!" ಇದೇ ಈಗಿನ ಕಾಲದ ಲಗ್ನ ಪತ್ರಿಕೆ! ಎಷ್ಟು ಸುಲಭ, ಸರಳ, ನೇರವಾಗಿ ಹೊಟ್ಟೆಯನ್ನೇ ಹೊಗುವಂತಹ ಶೈಲಿ!

*    *    *    *

ಲಗ್ನ ಪತ್ರಿಕೆ ಕೆಳಗಡೆ ಗೀಟೆಳೆದು ನಮ್ಮ ನಂಟರ ಪೈಕಿ ದೊಡ್ಡ ಮನುಷ್ಯರಾದ ವರ ಹೆಸರುಗಳನ್ನೆಲ್ಲಾ ಸೇರಿಸಿದೆ. ನಲವತ್ತು ಹೆಸರುಗಳು ಸಿಕ್ಕಿದುವು. ರಾವು ಬಹದ್ದೂರ್ ಸೂರ್ಯನಾರಾಯಣರಾಯರ ಹೆಡ್ ಗುಮಾಸ್ತೆ ಹಿರಿಯಣ್ಣಯ್ಯನವರಿಂದ ಪ್ರಾರಂಭವಾಗಿ, ಕರತಾಡನಕೇಸರಿ ಕನ್ನಡ ಕವಿಮಾಡಿಯರ್ ಕಾಳಯ್ಯನ ವರೆಗೂ ಸೇರಿ ಸಲೇ ಬೇಕಾಯಿತು.

ಕೊನೆಗೆ ನನಗೇ ನಗು ಬಂತು....ಊರಲ್ಲಿ ಅಚ್ಚು ಹಾಕಿಸುವುದೇ ಅಗ್ಗ!—ಅಂತ ತಂದೆಗೆ ಕಾಗದ ಬರೆದೆ. ಪರವಾಗಿಲ್ಲ, ಕಾಸುಳಿಸುವ ಕೂಸು ಹುಟ್ಟಿತಲ್ಲಾ ಅಂತ ಅವರು ಆನಂದಪಡುವರೆಂದು ನನಗೆ ಗೊತ್ತಿತ್ತು. ಅರ್ಧ ಆಣೆ ಉಳಿಸುವುದಕ್ಕೆ ಅರ್ಧ ಬೆಟ್ಟ ಹತ್ತುವ ಕಷ್ಟ ಜೀವಿ ಅವರು!

ಸೋಮವಾರ "ಬಟ್ಟೆ ಹೊಲಿಸಿಕೊ" ಅಂತ ಹೇಳಿ ೫೦ ರೂಪಾಯಿ ಕಳುಹಿಸಿ ಕೊಟ್ಟರು, ಆ ದಿನ ರಾತ್ರಿ ಊರಿಗೆ ಹೊರಟೆ. ಗುರುವಾರ, ಅಲ್ಲಿಂದ........ಅಲ್ಲಿಗೆ ಅಳಿಯನಾಗಿ ಪ್ರಯಾಣ!....!!....!!!

(ಮುಂದಿನ ತಿಂಗಳು 'ಮನೆ ತುಂಬಾ ನಂಟರು')

—(ಎಸ್. ವೀ. ವೀ. ಕೃತಂ).

# ರಾಮಾಯಣದ ಪ್ರೆಸ್

## ವಾನರ ಮಧ್ಯದಲ್ಲಿ ವಿಭೀಷಣ !

## ಲಂಕೆಯಿಂದ ಪರಾರಿಯೇ ?

### ವಾನರ ಸಭೆಯಲ್ಲಿ ಪರ್ಯಾಲೋಚನೆ

ಕಿಷ್ಕಿಂಧೆ..........

ಈ ದಿನ ಹೊರಟ ಸರ್ಕಾರದ ಪ್ರಕಟನೆಯೊಂದು ಪ್ರಪಂಚದ ವಿದ್ಯಮಾನಗಳ ಮೇಲೇ ಭಾರಿ ಪರಿಣಾಮವನ್ನುಂಟುಮಾಡುವಂತಹ ಸಮಾಚಾರವನ್ನೊಳಗೊಂಡಿದೆ.

"ನಿನ್ನೆ ಸಮುದ್ರ ತೀರದ ವೃಕ್ಷಗಳಲ್ಲಿದ್ದ ಕೆಲವು ವಾನರರು ಮಹೋನ್ನತ ಕಾಯನೊಬ್ಬನು ನಾಲ್ವರು ಅನುಯಾಯಿಗಳೊಡನೆ ಆಕಾಶದಲ್ಲಿ ಬಂದು ಕೆಳಗಿಳಿದ ಕೂಡಲೆ ಆತನನ್ನು ಬಂಧಿಸಿ, ಸುಗ್ರೀವನ ಬಳಿಗೆ ಕೊಂಡೊಯ್ದು, ಅವನಿಗೆ ಸಮಾಚಾರವನ್ನು ತಿಳಿಸಿದರು. ಸುಗ್ರೀವ ಪ್ರಭುವಿಗೂ ಆಗಂತುಕನಿಗೂ ನಡೆದ ಸಂಭಾಷಣೆಯಿಂದ ಆತನು ವಿಭೀಷಣನೆಂದು ತಿಳಿದ ಕ್ಷಣವೇ ಸುಗ್ರೀವನು ಶ್ರೀರಾಮನ ಬಳಿಗೆ ಬಂದು ಅವನಲ್ಲಿ ವರದಿಯೊಪ್ಪಿಸಿದನು. ಉತ್ತರಕ್ಷಣದಲ್ಲಿಯೇ ಮಂತ್ರಿಗಳ ಸಭೆ ಸೇರಿ ಪರ್ಯಾಲೋಚನೆ ನಡೆಸಿತು. ವಿವರಗಳನ್ನೊಳಗೊಂಡ ಇನ್ನೊಂದು ಪ್ರಕಟನೆ ಆ ಮೇಲೆ ಹೊರಬೀಳುವುದು.

### ವಿಸ್ಮಯಕರ ಘಟನೆ

ರಾವಣ ಸೋದರನಾದ ವಿಭೀಷಣನು ಸೆರೆ ಸಿಕ್ಕಿದ ವಿಚಾರವನ್ನು ಬೇರೊಂದು ಕಡೆ ಪ್ರಕಟಿಸಿದ್ದೇವೆ. ಈ ಅನಿರೀಕ್ಷಿತ ಘಟನೆಯ ವ್ಯಾಪ್ತಿಯು ಸುಲಭವಾಗಿ ಗಣನೆಗೆ ಬರತಕ್ಕದ್ದಲ್ಲ. ಆಗಂತುಕನು ವಿಭೀಷಣನೇ ಅಲ್ಲವೇ ಎಂಬುದು ನಿರ್ಧಾರವಾಗಿಲ್ಲ. ಆತ ತಾನು ವಿಭೀಷಣನೆಂದು ಹೇಳಬಹುದು; ಹಾಗೆ ಕಾಣಬಹುದು. ಆದರೆ ಅವನು ರಾಕ್ಷಸನಾದುದರಿಂದ ಕಾಮರೂಪಿಯೆಂದೂ, ಆತನ ಮಾತಿಗೆ ಇನ್ನೂ ಸಮರ್ಥನೆ ದೊರೆತಿಲ್ಲವೆಂದೂ ನೆನಪಿಡಬೇಕು. ಈತನನ್ನು ಮೊದಲು ನೋಡಿದ ವಾನರರೂ, ಸುಗ್ರೀವನೂ ಮತ್ತು ವಿಭೀಷಣನೂ ಸಹ ಹೇಳತಕ್ಕದ್ದೇನಿದೆ ಎಂದು ತಿಳಿಯಬೇಕು. ಇದರ ಜತೆಗೆ ಲಂಕೆಯಿಂದ ಬರತಕ್ಕ ಸುದ್ದಿಯನ್ನೂ ಜೋಡಿಸಿ, ಈ ಘಟನೆಯ ಮರ್ಮವನ್ನು ತಿಳಿಯಬೇಕಾಗಿದೆ.

ಆಗಂತುಕನು ವಿಭೀಷಣನೇ ಎಂದುಕೊಳ್ಳೋಣ. ಹಾಗಾದರೆ, ಅವನ ಆಗಮನದ ಗುಟ್ಟೇನು ? ಅವನು ಗೂಢಚಾರನಾಗಿ ಬಂದಿರಬಹುದು, ಇಲ್ಲವೆ ದೂತನಾಗಿ ಬಂದಿರಬಹುದು. ಗೂಢಚಾರನಂತೆ ಬಂದು ನಮ್ಮ ಸೈನ್ಯದ ಸಂಖ್ಯಾಬಲ, ಸಜ್ಜು ಮತ್ತು ವ್ಯೂಹಗಳನ್ನು ತಿಳಿಯಲಪೇಕ್ಷಿಸಿರಬಹುದು. ಆದರೆ ಈಗ ಅವನು ಸೆರೆ ಸಿಕ್ಕಿರುವುದರಿಂದ ತಕ್ಕ ಶಾಸ್ತಿಯಾದಂತೆಯೇ. ಅಲ್ಲದೆ ನಿಶ್ಚಯವಲ್ಲವೆಂದು ಹೇಳುವುದಕ್ಕಾಗದೆ ಇರುವ ಯುದ್ಧವು ನಿಶ್ಚಯವಾದಂತೆಯೆ ಕಾಣುವಂತಿದೆ. ಎರಡನೆಯದಾಗಿ, ಅವನು ದೂತನಾಗಿ ಶಾಂತಿಪರಿಪಾಲನೆಗೆ ಪ್ರಯತ್ನಿಸ ಬಂದಿರಬಹುದು. ಇದಕ್ಕೆ ರಾವಣನ ಶರತ್ತುಗಳೇನೆಂದು ತಿಳಿಯಬೇಕಾಗಿದೆ. ನಾವು ಹೇಳಬಹುದಾದರೆ ನಮ್ಮ ಶರತ್ತುಗಳು ಸೀತೆಯ ಬಿಡುಗಡೆ ಮತ್ತು ಸಾತ್ವಿಕ ರಾಜ್ಯಭಾರ—ಇವೆರಡೇ.

ವಿಭೀಷಣನೇನಾದರೂ ರಾಕ್ಷಸರಾಜ್ಯವನ್ನು ಬಿಟ್ಟು ಬಂದಿರಬಹುದೆ ಎಂಬ ಯೋಚನೆಯೂ ಮನಸ್ಸಿನಲ್ಲಿ ಮೂಡುತ್ತದೆ. ಇದು ನಿಜವಾಗಿದ್ದರೆ ರಾಕ್ಷಸರಲ್ಲಿ ಐಕ್ಯಮತ್ಯವಿಲ್ಲವೆಂದು ದೃಢವಾಯಿತು. ನಾವು ಹೇಳುವುದೇನೆಂದರೆ—ಎಲ್ಲ ದೂರದೃಷ್ಟಿಯುಳ್ಳವರೂ ನಮ್ಮ ಮಾತನ್ನು ಒಪ್ಪುವುದರಲ್ಲಿ ಸಂದೇಹವಿಲ್ಲ—ಅಮರರೂ ವಾನರರೂ ಸೇರಿ, ಈ ಸಮಯವನ್ನು ಸಾಧಿಸಿ, ರಾಕ್ಷಸರನ್ನು ನಿರ್ಮೂಲ ಮಾಡಿ, ಲೋಕವನ್ನು ಸಜ್ಜನರಿಗೆ ಸುಗಮವನ್ನಾಗಿ ಮಾಡಬೇಕು. ಕ್ಷಣಕಾಲ ಯುದ್ಧದಿಂದ ಶಾಂತಿಭಂಗವಾದರೂ, ಅದರ ಪರಿಣಾಮವಾಗಿ ಅಮರಶಾಂತಿ ಪ್ರತಿಷ್ಠೆಯಾಗಬೇಕು.

—ಬಿ. ಚಂ.

# ಬಿರುಕು ಗೋಡೆ

ಬಚ್ಚಲಮನೆ ಗೋಡೆಯು ಸ್ವಲ್ಪ ಬಿರುಕುಬಿಟ್ಟಿದೆ. ಗೋಡೆ ಬಿದ್ದರೆ ಯಾವ ಕಡೆಗೆ ಬೀಳುತ್ತೋ ಎಂಬ ಅನುಮಾನ ಇನ್ನೂ ಬಗೆ ಹರಿದಿಲ್ಲ. ದಾರಕ್ಕೊಂದು ಕಲ್ಲು ಕಟ್ಟಿ ಬಿರುಕಿನಿಂದ ತೂಗುಹಾಕಿ, ಕಲ್ಲು ಬೀಳುವ ಕಡೆಗೆ ಗೋಡೆ ಬೀಳುತ್ತೆ ಎಂದು ಕಾಲೇಜಿನಲ್ಲಿ ಹೇಳಿಕೊಟ್ಟ ಅಭ್ಯಾಸವನ್ನು ಮಾಡಿದೆ. ಕಲ್ಲು ನನ್ನ ಕಾಲ್ಬೆರಳ ಮೇಲೆ ಬಿತ್ತು. ಅಯಯ್ಯೊ ಎಂದು ಬಚ್ಚಲಿನಲ್ಲಿ ಕಾಲಿಟ್ಟೆ. ಬಚ್ಚಲೂ ನನ್ನಂತೆಯೇ ನಯ ವಿನಯ ಮೂರ್ತಿ. ಕಾಲು ಜೊತೆಗೆ ಕೈ ಕೊಟ್ಟುಕೊಂಡು ಬಿದ್ದೆ.

"ಹೋಗಲಿ ಬಿಡಿ ಅಂದ್ರೆ, ಯಾರನ್ನಾದರೂ ಕೇಳಿದರೆ ಹೇಳುತ್ತಾರೆ. ನೀವು ಯಾಕೆ ಇದಕ್ಕೆಲ್ಲಾ ಕಷ್ಟಪಡಬೇಕು" ಎಂದು ಉತ್ತೇಜನ ಕೊಟ್ಟಳು ನಮ್ಮಾಕೆ. ಜಾರಿಬಿದ್ದ ನಾನು ಗಾದೆ ಜ್ಞಾಪಿಸಿಕೊಂಡು ಹಲ್ಲುಗಳೆಲ್ಲಾ ಸರಿಯಾಗಿದೆಯೊ ಎಂದು ನೋಡಿಕೊಂಡು, ಮೆಲ್ಲಗೆ ಎದ್ದುಬಂದೆ. ಆಕೆಯ ಸಲಹೆಯನ್ನೇ ಒಪ್ಪಿದೆ.

ಮೇಸ್ತ್ರಿ ಬಾಯಪ್ಪನನ್ನು ಕೇಳಿದೆ. "ಇದೇನು ಮಾಡುತ್ತೆ ಸ್ವಾಮಿ. ಒಂದು ಊರೆಗೋಲು ಕೊಟ್ಟು ಸೂರನ್ನೆತ್ತಿದ್ದರೆ ಗೋಡೆ ಬೀಳೋದೆ ಇಲ್ಲ" ಎಂದ. ಬಟ್ಟೆ ಹರವುವ ಮಡಿಕೋಲನ್ನು ಒಂದು ಗೋಡೆಯಿಂದ ಇನ್ನೊಂದು ಗೋಡೆಗೆ ಊರಿ ಕೊಟ್ಟು ತೋರಿಸಿದ. ನೋಡೋಣ ಎಂದು ಒಳಕ್ಕೆ ಹೋದ ನಾನು ಗಳುವಿಗೆ ತಲೆ ತಾಕಿಸಿ, ಗಳುವನ್ನೂ ಮುರಿದೆ. ಭಾವಣಿಯೇನೂ ಬೀಳಲಿಲ್ಲ.

ಇವನಿಗೆ ತಿಳಿಯದು, ಓದಿ ಪಾಸು ಮಾಡಿದ ಶೀನೈಯ್ಯಂಗಾರ್ಯರನ್ನು ಕೇಳೋಣ ಎಂದು ಆತನನ್ನು ಕರೆದುಕೊಂಡು ಬಂದು ಈ ಬಿರುಕು ಗೋಡೆಯನ್ನು ತೋರಿಸಿದೆ. "ಅಯ್ಯೋ ಇದಕ್ಕೇನ್ರೀ ಹೆದರುತ್ತೀರಿ. ಈ ಬಿರುಕು ಹೊರಗಿನತನಕ ವ್ಯಾಪಿಸಿಲ್ಲ. ಸುಣ್ಣ ತೊಡೆಸಿಬಿಡಿರಿ ಕಾಣದಹಾಗೆ" ಎಂದು ಆತ ಸಲಹೆ ಕೊಟ್ಟ.

"ಸುಣ್ಣ ತೊಡೆಸಿದರೆ ಗೋಡೆ ಕಣ್ಣು ಕುರುಡೇ? ಎಂದೋ ಬಿದ್ದೇ ಬೀಳುತ್ತೆ. ಆಗ ನೀವು ಅಭ್ಯಂಜನ ಮಾಡುತ್ತಿದ್ದರೆ, ಶೀಗೆಕಾಯಿಪುಡಿಗೆ ಹೆದರಿ ಕಣ್ಣುಮುಚ್ಚಿಕೊಂಡಿದ್ದರೆ, ಗೋಡೆ ಬೀಳುವುದೂ ಕಾಣುವುದಿಲ್ಲ. ಕಂಡರೂ ಹೊರಗೆ ಓಡಿಬರಲಾಗುವುದಿಲ್ಲ. ಏನಾದರೂ ಉಪಾಯ ಮಾಡಲೇಬೇಕು" ಎಂದು ನನ್ನ ಮನೆಯಾಕೆಯ ಒತ್ತಾಯ.

ಇಷ್ಟಕ್ಕೇ ಬಿಡಬಾರದು. ಬಿರುಕಾಗಿ ಹುಟ್ಟಿದ್ದು ಬೆಳೆಯದೇ ಬಿಡುತ್ತದೆಯೇ. ಎಂದೊ ಯಾರದೋ ತಲೆ ಒಡೆದೇ ಬಿಡುತ್ತೆ ಎಂದು ನಾನೂ ಯೋಚಿಸಿ ಶಿಲ್ಪಿ ವಿಶಾರದನೆಂದು ಪ್ರಸಿದ್ಧನಾದ ಕನ್ನಯ್ಯನನ್ನು ಕೇಳಿದೆ. ಆತನು ಸಾವಧಾನವಾಗಿ ಪರೀಕ್ಷಿಸಿ, ಮನೆ ಹೊರಗೆ ಬಂದ. ದೂರದಲ್ಲಿದ ಅಗಸೆ ಮರವನ್ನು ನೋಡಿದ, ನನ್ನನ್ನೂ ನೋಡಿದ. "ಬಚ್ಚಲುಮನೆ ಸೂರಿನಿಂದ ಅಗಸೇಮರದ ತುದಿಗೆ ಒಂದು ತಂತಿಯನ್ನು ಕಟ್ಟಿಸಿಬಿಡಿ. ಭಾವಣಿಯ ಭಾರವೆಲ್ಲಾ ತಂತಿಯಮೇಲೆ ಬೀಳುತ್ತೆ.

ಗೋಡೆ ಭದ್ರವಾಗಿರುತ್ತೆ, ಬಿರುಕಿದ್ದರೂ'' ಎಂದ.

ಇಲಿಗಳ ಕತೆ ಕೇಳಿಲ್ಲವೇ, ಬೆಕ್ಕಿನ ಕತ್ತಿಗೆ ಗಂಟೆ ಕಟ್ಟಿದರೆ ಆಗ ಇಲಿಗಳಿಗೆಲ್ಲಾ ಬೆಕ್ಕಿನ ಆಗಮನ ತಿಳಿದೇ ತಿಳಿಯುತ್ತೆ. ಎ.ಆರ್.ಪಿ. ವ್ಯವಸ್ಥೆ. ಈ ರೀತಿ ಇಲಿಗಳು ಮಾಡುವುದಕ್ಕೆ ಒಂದೇ ತೊಂದರೆ—ಬೆಕ್ಕಿನ ಕತ್ತಿಗೆ ಗಂಟೆ ಯಾರು ಕಟ್ಟಬೇಕು ?

ಇದೇ ಸಮಸ್ಯೆ ನನಗೂ. ಅಗಸೇ ಮರದ ತುದಿಗೆ ತಂತಿ ಬಿಗಿದು ಕಟ್ಟುವುದು ಹೇಗೆ? ಅದರೆದುರಿಗೆ ನಿಂತುಕೊಂಡು ನಾನೇ ಸ್ವಲ್ಪ ಜೋರಾಗಿ ಕೆಮ್ಮಿದರೆ ಕೊಂಬೆಗಳೇ ಮುರಿದುಬೀಳುತ್ತೆ. ಹೀಗಿರುವಾಗ ಈ ಮರ ಹತ್ತುವುದಾದರೂ ಹೇಗೆ? ಇರಲಿ. ಈ ಶಾಸ್ತ್ರೀಯವಾಗಿ ಸಲಹೆ ಹೇಳುವವರೇ ಹೀಗೆ. ಈ ಸಮಸ್ಯೆಗೆ ನಾಟಿ ವೈದ್ಯವೇ ಮೇಲು ಎಂದುಕೊಂಡು ಗಾರೆ ವರದರಾಜುವನ್ನು ಕರೆದು ಕೇಳಿದೆ. ಅವನು ಈ ಬಿರುಕನ್ನು ನೋಡಿದ. ಬೆರಳಿಟ್ಟು ಆಳ ಕಂಡು ಹಿಡಿದ. ಅದೇ ಬೆರಳನ್ನು ಚಪ್ಪರಿಸುತ್ತ ಹೊರಗೆ ಬಂದ.

"ಸಾಮೀ, ಇಂದ ಬಿರುಕು ಏನೂ ಪಣ್ಣೋದಿಲ್ಲ. ಆದರೂ ಬಚ್ಚಲ ತಣ್ಣಿ ಬಿದ್ದೂಬಿದ್ದೂ ಬಿರುಕು ದೊಡ್ಡದಾರುದು. ಒಂದು ಇಟ್ಟಿಗೆ ಬಿತ್ತು ಎಂದರೆ ಥಾವಣಿ ಕೂಡ ಬಿದ್ದಡುಂ. ಆದನಾಲೆ ಇನ್ನೋರು ಗೋಡೆ ಇದರ ಪಕ್ಕದಲ್ಲೇ ಕಟ್ಟಿಬಿಟ್ಟರೆ ನಲ್ಲದು'' ಎಂದ.

ಗೋಡೆ ಮೇಲೆ ಗೋಡೆ ಕಟ್ಟಿಸಿದರೆ, ಇದ್ದ ಬಚ್ಚಲು ಮುಚ್ಚೇ ಹೋಗುತ್ತೆ. ಮೊದಲೇ ಬಚ್ಚಲುಮನೆ ಸಣ್ಣ, ಇನ್ನೂ ಸಣ್ಣದು ಮಾಡಿದರೆ, ನಾನು ಬಚ್ಚಲುಮನೆ ಒಳಕ್ಕೆ ಹೋದರೆ ಒಲೆ ಹೊರಗೆ ಬರಬೇಕಾಗುತ್ತೆ. ಇದು ಸರಿಯಲ್ಲ ಎಂದುಕೊಂಡೆ.

ಅವರಿವರ ಸಲಹೆ ಸುಖವಿಲ್ಲ. ಶೀನೈಯ್ಯಂಗಾರ್ ಹೇಳಿದ್ದೇ ಚೆನ್ನ. ಗೋಡೆಗೆ ಸುಣ್ಣ ತೊಡೆಸಿಬಿಡೋದು. ಅದರ ಜತೆಗೆ ನನ್ನದೊಂದು ಚಮತ್ಕಾರ ಮಾಡಿದೆ. ಮನೆಯಾಚೆ ಒಂದು ಬೋರ್ಡು ತಗಲುಹಾಕಿದೆ.

"ಮನೆ ಮಾರಾಟಕ್ಕಿದೆ.
ಒಳಗೆ ವಿಚಾರಿಸಿ.''



# ಹೊಸ ವರ್ಷದ ಗಾದೆಗಳು

"ಬೇವು ಬೆಲ್ಲದೊಳಿಡಲು—ಬೆಲ್ಲ ಎಲ್ಲಿಂದ ತರೋದು ? "

* * *

ತೂತಿನ ಕಾಸಿಗೆ ತಕ್ಕ ಕಜ್ಜಾಯ.

* * *

ಅಂದದ ಹೆಣ್ಣಿಗೆ ಮೂಕ್ಕನ್ನಡಿ ಏಕೆ ?

* * *

ಒಂದಲ್ಲಾ ಈ ತಿಂಗಳು—ದಿನವೆಲ್ಲಾ ಬೇಗೆ.

* * *

ಉಗಾದಿಗೆ ಉಗುಳು ನೀರು—ಖಂಡಿತ, ಸಂಪಾದಕರಿಗೆ.

* * *

ಕಂಕುಳಲ್ಲಿ ದೊಣ್ಣೆ—ಕೈಯಲ್ಲೂ ದೊಣ್ಣೆ—ಅಧಿಕಾರಿಗೆ.

* * *

ಹಿಂಗೈ ಹಣಕ್ಕೆ ರಸೀತಿ ಬೇಕೆ ?

* * *

ಹೊಟ್ಟೆಗಿಲ್ಲದ ಹಾರವ, ಜುಟ್ಟನ್ನೇ ಗಂಟುಹಾಕಿದ.

* * *

ಅಂಬಲಿಯೋ ತುಂಬಿಸೊಪ್ಪೋ, ಗಾದೆಯಲ್ಲಿ ಅಂಬಲಿ ಬಿಡಬೇಕಂತೆ

* * *

ಹಬ್ಬದ ದಿವಸಾನೂ, ಹಳೇ ಪತ್ರಿಕೇನೆ ?

* * *

ಇಲಿ ಕಂಡ ಬೆಕ್ಕಿನಂತೆ—ಅಕ್ಕಿ ಕಂಡ ನೌಕರನಂತೆ.

* * *

ಆಹಾರ ಅಧಿಕಾರಿಗಳ ಗೀತಾವಾಕ್ಯ—

ಅನನ್ಯಾಶ್ಚಿಂತಯನ್ ತೋಮಾಂ
ಯೇ ಜನಾಃ ಉಪವಾಸ್ಯತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಂ ॥

---

ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ

# ಬೆಂಗಾಲ್ .. .. .. ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ

## ಭಾರತದಲ್ಲೆಲ್ಲಾ ಉತ್ತಮವಾದುದೆಂದು ಖ್ಯಾತಿಪಡೆದಿದೆ